# ಲೋಚನ

ಸಂಪುಟ ೩ ಜೂನ್ ೧೯೮೫ ಸಂಚಿಕೆ ೧



## ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ

ವಾರ್ಷಿಕ ಚಂದಾ : ರೂ. ೬-೦೦ ಬಿಡಿ ಸಂಚಿಕೆ : ರೂ. ೪-೦೦

# 'ಲೋಚನ'



**ಲೇಖನಗಳು–ಟಿಪ್ಪಣಿಗಳು**

19–12–1982ರಂದು ನಡೆದ ಪ್ರತಿಷ್ಠಾನದ ಕಾರ್ಯಸಮಿತಿಯಲ್ಲಿ ಅಂಗೀಕೃತವಾದ ನಿರ್ಣಯ : "ಸಂಸ್ಥಾಪಕ ಕಾರ್ಯದರ್ಶಿಯವರ ಸೂಚನೆಯಂತೆ, ಬರುವ 1983ನೆಯ ವರ್ಷದಿಂದ ಸಂಶೋಧನಾತ್ಮಕ ಪಾಂಡಿತ್ಯಪೂರ್ಣ ಲೇಖನಗಳು ಹಾಗೂ ಹೊಸದಾಗಿ ಪ್ರಕಟವಾಗುವ ಉತ್ತಮ ಮಟ್ಟದ ಸಂಪಾದಿತ ಗ್ರಂಥಗಳು ಮತ್ತು ಶಾಸ್ತ್ರ ಸಾಹಿತ್ಯದ ಗ್ರಂಥಗಳು–ಇವುಗಳ ಮೇಲಣ ವಿಮರ್ಶೆಗಳು, ವಿದ್ವದ್ವಿಚಾರ ಮತ್ತು ವಿದ್ವತ್ ಪ್ರಪಂಚದ ವಿದ್ಯಮಾನ ಇವುಗಳಿಗೆ ಸಂಬಂಧಿಸಿದ ಟೀಕೆ ಟಿಪ್ಪಣಿಗಳು–ಇವುಗಳಿಗೆ ಮೀಸಲಾದ ವಿದ್ವತ್‌ಪತ್ರಿಕೆಯನ್ನು ವರ್ಷಕ್ಕೆ ಎರಡು ಸಲ (ಜೂನ್ ಮತ್ತು ಡಿಸೆಂಬರ್) ಪ್ರಕಟಿಸಬಹುದೆಂದೂ ಈ ಪತ್ರಿಕೆಗೆ "ಲೋಚನ" ಎಂಬ ಹೆಸರನ್ನು ಇಡಬಹುದೆಂದೂ ತೀರ್ಮಾನಿಸಲಾಯಿತು. ಪ್ರಾರಂಭದಲ್ಲಿ ಪತ್ರಿಕೆಯ ಗಾತ್ರ ಡೆಮಿ 1/8 ಆಕಾರದ 64 ಪುಟಗಳಷ್ಟು ಇರಬಹುದೆಂದು ಸೂಚಿಸಲಾಯಿತು."

**ಲೇಖನಗಳಿಗೆ ಆಹ್ವಾನ**

ಮೇಲ್ಕಂಡ ನಿರ್ಣಯದಲ್ಲಿ ವ್ಯಕ್ತಪಟ್ಟಿರುವ ಆಶಯಕ್ಕೆ ಅನುಗುಣವಾದ ಲೇಖನಗಳನ್ನು ವಿದ್ವಾಂಸರೂ ಭಾಷೆ ಸಾಹಿತ್ಯಗಳ ಪ್ರೌಢ ವಿದ್ಯಾರ್ಥಿಗಳೂ ಕಳಿಸಿಕೊಡಬೇಕೆಂದು ವಿನಂತಿ. 'ಲೋಚನ'ದ ಗಾತ್ರ ಪರಿಮಿತವಾದದ್ದರಿಂದ ಲೇಖನಗಳು ಅಚ್ಚಿನ 6–8 ಪುಟಗಳ ಪರಿಮಿತಿಯಲ್ಲಿ ಇದ್ದರೆ ಅನುಕೂಲ. ಟಿಪ್ಪಣಿಗಳು 1–2 ಪುಟಗಳ ಪರಿಮಿತಿಯಲ್ಲಿರಬಹುದು. ಲೇಖನಗಳು ಹಾಳೆಯ ಒಂದೇ ಪಕ್ಕದಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಅಡಿಟಿಪ್ಪಣಿಗಳನ್ನು ಪುಟದ ಅಡಿಯಲ್ಲಿಯೇ ಕಾಣಿಸುವುದು ಒಳಿತು. ಗ್ರಂಥ–ಲೇಖನಾಧಾರ ವಿವರಗಳನ್ನು (Bibliography) ಲೇಖನದ ಕಡೆಯಲ್ಲಿ ಕೊಡಬಹುದು. ಯಾವುದೇ ಕಾರಣದಿಂದ ಲೇಖನವನ್ನು ಹಿಂದಿರುಗಿಸಲಾಗದ ಪ್ರಯುಕ್ತ ಲೇಖಕರು ತಮ್ಮ ಲೇಖನದ ಒಂದು ಪ್ರತಿಯನ್ನು ಉಳಿಸಿಕೊಂಡಿರಬೇಕಾಗಿ ಕೋರಿಕೆ.

**ವಿನಿಮಯ ಪತ್ರಿಕೆಗಳು**

೧. ಸಾರ್ವಜನಿಕ (ಇಂಗ್ಲಿಷ್) (ಬೆಂಗಳೂರು). ೨. ಸೋವಿಯತ್ ದೇಶ (ಮದರಾಸು). ೩. ಲಹರಿ (ಮದರಾಸು). ೪. ಅಂಕಣ (ಬೆಂಗಳೂರು). ೫. ಗ್ರಂಥಲೋಕ (ಮೈಸೂರು). ೬. ಅನ್ವೇಷಣೆ (ಬೆಂಗಳೂರು).

**ವಿಮರ್ಶೆಗಾಗಿ ಗ್ರಂಥಗಳ ಎರಡು ಪ್ರತಿಗಳನ್ನು ಲೇಖಕರು ಕಳಿಸಬೇಕು.**

ಸೃಜನಾತ್ಮಕ ಗ್ರಂಥಗಳನ್ನು ಸಾಧಾರಣವಾಗಿ ವಿಮರ್ಶೆ ಮಾಡಲಾಗುವುದಿಲ್ಲ; ಆದರೆ, ಕಳಿಸಿದರೆ 'ಸ್ವೀಕಾರ' ಭಾಗದಲ್ಲಿ ಗಮನಿಸಲಾಗುವುದು. ವೈಶಿಷ್ಟ್ಯವುಳ್ಳ ಗ್ರಂಥಗಳನ್ನು ಸಾಧ್ಯವಾದರೆ ಅವಲೋಕನ ಮಾಡಿಸಲಾಗುವುದು.

For Distribution among Members only



# LOCHANA

(A Half-yearly Journal Published by B M Sri Memorial Foundation, 54, 3rd Cross, Gavipuram Extension, Bangalore-19)

*Chief Editor:* Prof. G. Venkatasubbiah

*Executive Editor:* Prof. M. V. Seetharamiah

*Editor:* T. R. Mahadeviah

*Vol. 3* *June 1985* *No. 1*

## CONTENTS

# ಪರಿವಿಡಿ

# ಲೋಚನ




ಸಂಪುಟ ೩ ಜೂನ್ ೧೯೮೫ ಸಂಚಿಕೆ ೧

## ಬೆಳಗಾದುದೇಳು*

ಬೆಳಗಾದುದೇಳು । ಬೆಳಗಾದುದೇಳು
ಬೆಳ್ಗುಳದೊಡೆಯನ ಪಾದ । ನಳಿನಯುಗವನೊಮ್ಮೆ
ನಿಟ್ಟಿಸು ಭವ್ಯ ॥ ಪ ॥

ಕತ್ತಲೆ ಪರಿದೋಡೆ ಕಾಮುಕರೆದೆಗೆಡೆ
ಮೆತ್ತಮೆತ್ತನೆ ತಂಗಾಳಿ ತೀಡೆ
ಅರ್ತಿಯಿಂದಬ್ಜ [ಸ]ಂತತಿ ನಲಿನಲಿದಾಡೆ
ಕತ್ತೆತ್ತಿ ಕೋಳಿ ಕೂಗಿದವು ಕೂಡೆ ॥ ೧ ॥

ಕುಮುದಿನಿ ಕಣ್ಣೂರೆ ಕೋಕಿಲಂ ಸ್ವರದೋರೆ
ಅಮೃತ ಕಿರಣ ಬಟ್ಟಬಯಲ ಸೇರೆ
ಭ್ರಮರ ಝೇಂಕ(ರ)ದೋರೆ ಭಗಣ ಭಗ್ಗನೆ ಜಾರೆ
ದ್ಯುಮಣಿಯುದಯಗಿರಿ ಅಗ್ರವೇರೆ ॥ ೨ ॥

ಅಲರರಳುತಲಿವೆ ಉಲಿಯುತಲಿವೆ ಪಕ್ಷಿ
ಕೆಳೆಗೊಳುತಿವೆ ಚಕ್ರಮಿಥುನಂಗಳು
ಮೊಳಗುತಲಿವೆ ಶಂಖ ಜಿನನಿಲಯಂಗಳೊಳು
ಘಳಿಲನೆಚ್ಚರು ಗೋಮಟೇಶನೆ ಗತಿಯೆಂದು ॥ ೩ ॥

---

* ಈ ಅಪ್ರಕಟಿತ ಹಾಡು ಅಜ್ಞಾತ ಕಾಲಕರ್ತೃಕ. ಬೆಂಗಳೂರಿನ ಜೈನ ಸಾಹಿತ್ಯ ಸಂಶೋಧನ ಕೇಂದ್ರದಲ್ಲಿದೆ.(ಕ್ರ. ಸ. 56. JLRI).

ಉದಯರಾಗವ ಬುಧಜನರು ಪಾಡುತಲಿಹರು
ಮದನಾರಿ ಭವ್ಯರುಗಳು ಓದುತಲಿಹರು
ವಿದಿತಧ್ಯಯನಗಳ ಋಷಿಗಳೋದುತಲಿಹರು
ಮದವೆದ್ದು ಮಲಗಿರಬೇಡೇಳು ಭವ್ಯ ॥ ೪. ॥

ಪಂಡಿತಾಚಾರ್ಯ ಕುಲಸ್ವಾಮಿ ಎನಿಪ ಭೂ
ಮಂಡಲಗಧಿಕ ಬೆಳ್ಗುಳಗಿರಿಯಾ
ಮಂಡೆಯೊಳ್ನಿಂದ ಶ್ರೀ ಗೋಮಟೇಶನ ಪಾದ
ಪುಂಡರೀಕವ ನಂಬಿ ಸುಖಿಯಾಗು ಭವ್ಯ ॥ ೫ ॥

ಬೆಳಗಾದುದೇಳು.........

—ಸಂ. ಮಹೇಂದ್ರ



# ದಕ್ಷಿಣಕನ್ನಡ ಜಿಲ್ಲೆಯಲ್ಲಿ ಹಸ್ತಪ್ರತಿಗಳ ಸಂಗ್ರಹ

—ಎಸ್. ಅನಂತರಂಗಾಚಾರ್

ದಕ್ಷಿಣ ಕನ್ನಡವು ಅನೇಕ ರೀತಿಯಿಂದ ಬಹು ಆಕರ್ಷಕವಾಗಿದೆ. ಅಲ್ಲಿಯ ಅದ್ಭುತವಾದ ಪ್ರಕೃತಿ ಸೌಂದರ್ಯ, ದೀರ್ಘವಾದ ಕರಾವಳೀ ಪ್ರದೇಶ, ತೆಂಗಿನ ತೋಪುಗಳು, ಮತ್ಸ್ಯಸಮೃದ್ಧಿ, ಫಲವತ್ತಾದ ಅಸಂಖ್ಯಾತವಾದ ತೊರೆಗಳು— ಒಂದೊಂದೂ ಮನಸ್ಸನ್ನು ಸೆಳೆಯುತಕ್ಕವುಗಳು. ಇವೆಲ್ಲಕ್ಕಿಂತಲೂ ಅಲ್ಲಿಯ ಪವಿತ್ರ ಕ್ಷೇತ್ರಗಳಾದ ಉಡುಪಿ, ಮೂಡಬಿದ್ರೆ, ಕಾರ್ಕಳ, ಧರ್ಮಸ್ಥಳ, ಇವುಗಳು ವಿವಿಧ ಧರ್ಮೀಯರನ್ನು ತಮ್ಮಲ್ಲಿಗೆ ಸೆಳೆದುಕೊಳ್ಳುತ್ತವೆ. ಇಲ್ಲಿಯ ಮಾಧ್ವಮಠಗಳಲ್ಲಿಯೂ ಜೈನಬಸದಿಗಳಲ್ಲಿಯೂ ಅಪೂರ್ವವಾದ ಕೈಬರಹದ ಗ್ರಂಥಗಳ ಅಪೂರ್ವ ಸಂಗ್ರಹವಿದೆ. ಅವುಗಳ ಪರಿಚಯ ಹೊರಗಿನವರಿಗೆ ಆಗಿಲ್ಲ.

ಇವುಗಳ ಪರಿಚಯವನ್ನು ಮಾಡಿಕೊಂಡು ಆದಷ್ಟು ಅಪೂರ್ವ ಗ್ರಂಥಗಳನ್ನು ಮೈಸೂರು ಪ್ರಾಚ್ಯಕೋಶಾಗಾರಕ್ಕೆ ಎರವಲಾಗಿ ತರಲು ನಾನು ೧೯೩೬ನೆಯ ವರ್ಷದ ಏಪ್ರಿಲ್ ತಿಂಗಳಿನಲ್ಲಿ ಹಾಸನ ಮತ್ತು ಸಕಲೇಶಪುರ ಮಾರ್ಗವಾಗಿ ಪ್ರಯಾಣ ಮಾಡಿ ಮೊದಲು ಧರ್ಮಸ್ಥಳಕ್ಕೆ ಹೋದೆ. ಅಲ್ಲಿಯ ಪವಿತ್ರ ಶಾಂತವಾತಾವರಣ ಬಹು ಹಿತವಾಗಿದ್ದರೂ ಅಲ್ಲಿ ಯಾವ ಕೋಶಸಂಗ್ರಹವೂ ಇರಲಿಲ್ಲ. ಅಲ್ಲಿಂದ ದಾರಿಯಲ್ಲಿ ಗುರುಪುರದ ವೀರಶೈವ ಮಠವನ್ನು ಸಂದರ್ಶಿಸಿ ಅಲ್ಲಿದ್ದ ಕೆಲವು ಅಪೂರ್ವವಾದ ಶರಣರ ವಚನಗಳನ್ನು ಸಂಗ್ರಹಿಸಿಕೊಂಡು ಉಡುಪಿಗೆ ಹೋದೆ. ಅದು ಮಧ್ವ ಸಿದ್ಧಾಂತದ ಕೇಂದ್ರಸ್ಥಾನ. ಅಲ್ಲಿಯೇ ಮಾಧ್ವರ ಅಷ್ಟಮಠಗಳೂ ಶ್ರೀಕೃಷ್ಣನ ಸನ್ನಿಧಿಯೂ ಇರುವುದು. ಅಷ್ಟಮಠಗಳಲ್ಲಿ ಪ್ರಸಿದ್ಧವಾದುದು ಕಾಣೂರು ಮಠ. ಸ್ಥಳದಲ್ಲಿಯೇ ಇದ್ದ ಇತರ ಮಠಗಳಲ್ಲಿ ವಿಶೇಷವಾದ ಗ್ರಂಥರಾಶಿಯಿರಲಿಲ್ಲ. ಇದ್ದವೆಲ್ಲ ಚಿರಪರಿಚಿತವಾದ ದ್ವೈತಸಿದ್ಧಾಂತದ ಪ್ರಕರಣ ಗ್ರಂಥಗಳು. ಕಾಣೂರು ಮಠ ಮಾತ್ರ ಗ್ರಂಥಬಾಹುಳ್ಯ ದೃಷ್ಟಿಯಿಂದ ಅತಿ ಮುಖ್ಯವಾಗಿತ್ತು. ಅಲ್ಲಿಯ ಯತಿವರ್ಯರು ಎಂಬತ್ತನ್ನು ಮೀರಿದ್ದ ವೃದ್ಧರು. ಜರ್ಝರಿತವಾದ ಶರೀರ. ಅವರ ಆಚಾರನಿಷ್ಠೆ ಅವರ್ಣನೀಯ. ಮಠದಲ್ಲಿದ್ದ ಸುಮಾರು ೭೦೦ ಕೈಬರಹದ ಪ್ರತಿಗಳು ಅವರಿಗೆ ವಾಚೋವಿಧೇಯವಾಗಿತ್ತು. ನಮ್ಮ ಕೋಶಾಗಾರದ ಗ್ರಂಥಸೂಚಿಯನ್ನು ಓದುತ್ತಾ ಹೋದರೆ ಅವರು ತಮ್ಮಲ್ಲಿದ್ದ ಒಂದೊಂದು ಗ್ರಂಥದ ವಿವರಗಳನ್ನೂ ವೈಶಿಷ್ಟ್ಯವನ್ನೂ ಧಾರಾಕಾರವಾಗಿ ನಿರೂಪಿಸುತ್ತಿದ್ದರು. ತಮ್ಮ ಗ್ರಂಥಾಗಾರದ ಪ್ರತಿಯೊಂದು ಓಲೆಯ ಪತ್ರದ ಅಧ್ಯಾಯಗಳೂ ಪುಟಸಂಖ್ಯೆಗಳೂ ಅವರಿಗೆ ಹೃದ್ಗತವಾಗಿತ್ತು. ಅವರ ಪಾಂಡಿತ್ಯವನ್ನೂ ಜ್ಞಾಪಕಶಕ್ತಿಯನ್ನೂ ನೋಡಿ ನಾನು ಸ್ತಬ್ಧನಾದೆ. ಅವರ ಹೃದಯವೂ ಅಷ್ಟೇ ವೈಶಾಲ್ಯ. ನಮ್ಮಲ್ಲಿಲ್ಲದ ಮೂರು ಕೋಶಗಳನ್ನು ನಮಗೆ ಎರವಲಾಗಿ ಕೊಡಲು ಸ್ವಲ್ಪವೂ ಹಿಂಜರಿಯಲಿಲ್ಲ. ಅವರ ಆತಿಥ್ಯ ಮಾತೂ ಅನುಭವೈಕವೇದ್ಯ.

ಅಲ್ಲಿಂದ ನಾನು ಕಾರ್ಕಳಕ್ಕೆ ಪ್ರಯಾಣ ಮಾಡಿದೆ. ಅಲ್ಲಿಯ ಗೊಮ್ಮಟ ಶ್ರವಣಬೆಳಗೊಳದಷ್ಟು ಎತ್ತರವಲ್ಲದಿದ್ದರೂ ಬಹು ಸುಂದರಮೂರ್ತಿ. ಅಲ್ಲಿಯ ಕೆರೆ ಸಾಗರ ಸದೃಶವಾದುದು. ಕಾರ್ಕಳದ ಜೈನ ಮಠ ಪುರಾತನವಾದುದು. ಅಲ್ಲಿಯೂ ಒಂದು ಹಸ್ತಪ್ರತಿಗಳ ಸಂಗ್ರಹವಿದೆ. ೩೦–೪೦ ಓಲೆಯ ಗರಿಯ ಗ್ರಂಥಗಳು–ಎಲ್ಲವೂ ಜೈನ ಸಂಸ್ಕೃತ ಮತ್ತು ಕನ್ನಡ ಕೃತಿಗಳು. ನಮ್ಮ ಕೋಶಾಗಾರ ದಲ್ಲಿಲ್ಲದವಾವುವೂ ಇರಲಿಲ್ಲ.

ಕಾರ್ಕಳದಿಂದ ಮೂಡಬಿದರೆಗೆ ಪ್ರಯಾಣ ಮಾಡಿದೆ. ಅಲ್ಲಿ ಪರಿಚಿತರಾಗಿ ದ್ದವರು ಶ್ರೀಯುತರಾದ ಕೆ. ಭುಜಬಲಶಾಸ್ತ್ರಿಗಳು ಮತ್ತು ಲೋಕನಾಥ ಶಾಸ್ತ್ರಿಗಳು. ಮೊದಲನೆಯವರು ಆಗ ಆ ಊರಿನಲ್ಲಿರಲಿಲ್ಲ. ಉತ್ತರ ದೇಶದ ಆರಾ ಪಟ್ಟಣದಲ್ಲಿ ಕೋಶಾಗಾರಾಧಿಕಾರಿಗಳಾಗಿದ್ದರು. ಲೋಕನಾಥ ಶಾಸ್ತ್ರಿಗಳು ತಮ್ಮದೇ ಆದ "ಜೈನವಾಣೀ ವೀರ ಸಿದ್ಧಾಂತ ಭವನ"ವೆಂಬ ಓಲೆಯ ಗರಿಗಳ ಕೋಶಾಗಾರವನ್ನು ನಿರ್ಮಿಸಿಕೊಂಡಿದ್ದರು. ಅಲ್ಲಿಯೂ ನೂರಾರು ತಾಳಪತ್ರ ಪ್ರತಿಗಳಿದ್ದವು. ಲೋಕ-ನಾಥ ಶಾಸ್ತ್ರಿಗಳ ಸಹಾಯದಿಂದ ಅಲ್ಲಿಯ ಚಾರುಕೀರ್ತಿ ಸ್ವಾಮಿಗಳ ಶ್ರೀ ಮಠ ದಲ್ಲಿಯೇ ಬಿಡಾರ ಮಾಡಿದೆ. ಶ್ರೀ ಮಠದಲ್ಲಿಯೇ ಅಪೂರ್ವವಾದ ಹಸ್ತಲಿಖಿತ ಪ್ರತಿಗಳ ಸಂಗ್ರಹವಿದೆಯೆಂದು ಪ್ರತೀತಿಯಿತ್ತು. ಅದನ್ನು ಶ್ರೀ ಆರ್. ತಾತಾ ರವರು ಒಂದು ಸಂದರ್ಭದಲ್ಲಿ ವಿಶದಪಡಿಸಿದ್ದರು. ಆ ಗ್ರಂಥರಾಶಿಯನ್ನು ಪರಿಶೀಲಿಸು ವುದಕ್ಕಾಗಿಯೇ ಮೂಡಬಿದುರೆಗೆ ಹೋಗಿದ್ದುದು. ಮಠದ ಸ್ವಾಮಿಗಳು ಬಹು ಉದಾರಿಗಳು. ನನ್ನ ಬಿಡಾರಕ್ಕೆ ಬೇಕಾದ ಸೌಲಭ್ಯಗಳನ್ನು ಕಲ್ಪಿಸಿದ್ದರು. ಮಧ್ಯಾಹ್ನ ವಿರಾಮ ಮಾಡಿಕೊಂಡು ಗ್ರಂಥಸಂಗ್ರಹದ ವಿಷಯವಾಗಿ ವಿಚಾರ ಮಾಡುವುದ ಕ್ಕಾಗಿ ಅವರನ್ನು ಸಂದರ್ಶಿಸಿದೆ. ನಮ್ಮ ಸಂಭಾಷಣೆ ಪ್ರಾರಂಭವಾಯಿತು.

"ನಾನು ಮೈಸೂರು ಪ್ರಾಚ್ಯ ಕೋಶಾಗಾರದಿಂದ ಅಪೂರ್ವವಾದ ಹಸ್ತಲಿಖಿತ ಪ್ರತಿಗಳನ್ನು ಸಂಗ್ರಹಿಸಲು ಬಂದಿದ್ದೇನೆ. ನಮ್ಮಲ್ಲಿಲ್ಲದವನ್ನು ನಿಮ್ಮಿಂದ ಎರವಲು ತೆಗೆದುಕೊಂಡು ಹೋಗಿ ನಾವು ಪ್ರತಿಮಾಡಿಸಿಕೊಂಡು ನಿಮ್ಮ ಪ್ರತಿಯನ್ನು ಹಿಂದಿರು ಗಿಸುತ್ತೇವೆ. ಅಂತಹ ಅಪೂರ್ವ ಗ್ರಂಥಗಳನ್ನು ಮುದ್ರಿಸಲು ಏರ್ಪಾಟು ಮಾಡಿ ಮುದ್ರಿತವಾದ ಆರು ಪ್ರತಿಗಳನ್ನು ನಿಮಗೆ ಕೊಡುತ್ತೇವೆ."

"ಸಂತೋಷ, ಆಗಬಹುದು. ಬಹು ಒಳ್ಳೆಯ ಕೆಲಸವನ್ನು ಮಾಡುತ್ತಿದ್ದೀರಿ."

"ನಿಮ್ಮಲ್ಲಿ ಅಪೂರ್ವ ಭಂಡಾರವಿದೆಯೆಂದು ಕೇಳಿ ನಿಮ್ಮಲ್ಲಿಗೆ ಬಂದಿದ್ದೇನೆ."

"ಅಯ್ಯೋ! ನಮ್ಮಲ್ಲಿ ಯಾವ ಗ್ರಂಥವೂ ಇಲ್ಲವಲ್ಲಾ."

"ನಿಮ್ಮಲ್ಲಿ ಇದೆಯೆಂದು ವಿದ್ವಾಂಸರು ಹೇಳಿರುವುದನ್ನು ತಿಳಿದು ಬಂದೆವು."

"ಯಾವುದೋ ಒಂದು ಕಾಲದಲ್ಲಿತ್ತು. ಈಗ ಅವೆಲ್ಲ ನಾಶವಾಗಿದೆ."

"ಹಾಗೆನ್ನಬೇಡಿ. ಸ್ವಲ್ಪ ದಯವಿಟ್ಟು ಸಹಾಯ ಮಾಡಿ. ಲೋಕೋಪಕಾರ ವಾಗುತ್ತೆ."

"ಇಲ್ಲ ಖಂಡಿತವಾಗಿಯೂ ನಮ್ಮಲ್ಲಿ ಯಾವ ಕೈಬರಹದ ಪ್ರತಿಯೂ ಇಲ್ಲ."

"ನಮಗೆ ಕೊಡದಿದ್ದರೆ ಬೇಡಿ, ನಿಮ್ಮಲ್ಲಿರುವ ಗ್ರಂಥಗಳ ಪಟ್ಟಿಯನ್ನಾದರೂ ಕೊಡಿ."

"ಗ್ರಂಥಗಳೇ ಇಲ್ಲದಿರುವಾಗ ಪಟ್ಟಿಯೆಲ್ಲಿ ಬಂತು ? ನಿಮಗೆ ಬರೀ ಭ್ರಮೆ."

ನಾನು ಅವರಿಂದ ಸತ್ಯಾಂಶವನ್ನು ಹೊರಡಿಸುವುದಕ್ಕೆ ನನ್ನ ಬುದ್ಧಿಶಕ್ತಿಗಳನ್ನೆಲ್ಲಾ ಉಪಯೋಗಿಸಿದೆ. ಏನೂ ಪ್ರಯೋಜನವಾಗಲಿಲ್ಲ. ಕೊನೆಗೆ ಅವರಮೇಲೆ ಪ್ರಭಾವವನ್ನು ಬೀರಬಹುದಾದ ಒಂದು ಉಪಾಯವನ್ನು ಯೋಚಿಸಿದೆ. ಮೂಡಬಿದರೆಯಲ್ಲಿ ಅದುವರೆಗೆ ಜೈನಸಂಸ್ಕೃತಿಯ ವಿಷಯವಾಗಿ ಯಾವ ಸಾರ್ವಜನಿಕ ಉಪನ್ಯಾಸಗಳೂ ನಡೆದಿರಲಿಲ್ಲ. ಸ್ವಾಮಿಗಳವರೊಡನೆ ಪರ್ಯಾಲೋಚಿಸಿ ಅವರ ಅಧ್ಯಕ್ಷತೆಯಲ್ಲಿ ಮೂರು ಉಪನ್ಯಾಸಗಳನ್ನು ನಾನು ಕೊಡುವುದೆಂದು ನಿಷ್ಕರ್ಷಿಸಿದೆ. ಮೊದಲನೆಯ ದಿನ 'ಪಂಪನ ಆದಿಪುರಾಣ', ಎರಡನೆಯ ದಿನ 'ರನ್ನನ ಗದಾಯುದ್ಧ', ಮೂರನೆಯ ದಿನ 'ನಷ್ಟವಾದ ಜೈನ ಗ್ರಂಥಗಳು'. ಸ್ವಾಮಿಗಳವರೇ ಮೂರು ದಿನದ ಅಧ್ಯಕ್ಷರು. ಊರಿನ ಎಲ್ಲ ಜೈನ ಬಾಂಧವರಿಗೆ ಆಹ್ವಾನವನ್ನು ನೀಡಲಾಗಿತ್ತು. ಮಠದಲ್ಲಿಯೇ ಉಪನ್ಯಾಸ ಕಾರ್ಯಕ್ರಮ. ಮೊದಲನೆಯ ದಿನ ೩೦–೪೦ ಜನ ಮಾತ್ರ ಹಾಜರಿದ್ದರು. ಎರಡನೆಯ ದಿನ ಒಂದುನೂರಕ್ಕೇರಿತು. ಮೂರನೆಯ ದಿನ ೨೦೦ನ್ನೂ ಮೀರಿತು. ಅನೇಕರಿಗೆ ಜೈನ ಧರ್ಮದ ವಿಷಯದಲ್ಲಿ ಮತ್ತು ಗ್ರಂಥಗಳಲ್ಲಿ ಬಹು ಆಸಕ್ತಿಯುಂಟಾಯಿತು.

ಕೊನೆಯ ದಿನದ ಉಪನ್ಯಾಸ ಮುಗಿದಮೇಲೆ ನಾನು ನನ್ನ ಶಿಬಿರಕ್ಕೆ ಹೋಗಿ ಊಟ ಉಪಚಾರಗಳನ್ನು ಮುಗಿಸಿಕೊಂಡಮೇಲೆ ರಾತ್ರಿ ಸುಮಾರು ಹತ್ತು ಗಂಟೆಯ ಸಮಯದಲ್ಲಿ ಸ್ವಾಮಿಗಳು ನನಗೆ ಹೇಳಿ ಕಳುಹಿಸಿದರು. ಮುಂದಿನ ಸಂಭಾಷಣೆಯು ಪ್ರಾರಂಭವಾಯಿತು.

"ಪಂಡಿತರೇ, ಈದಿನ ನಿಮ್ಮ ಉಪನ್ಯಾಸ ಕೇಳಿದಮೇಲೆ ಅಪೂರ್ವವಾದ ಜೈನ ಗ್ರಂಥಗಳು ಒಂದೆಡೆ ಸೇರಬೇಕೆಂಬ ಅಪೇಕ್ಷೆ ನಮಗೂ ಉಂಟಾಗಿದೆ. ನಮ್ಮಲ್ಲೂ ಒಂದೆರಡು ಗಂಟುಗಳೂ ಇರಬಹುದು. ಅವುಗಳನ್ನು ನೀವು ಮುಟ್ಟದೆ ನೋಡುತ್ತೀರಾ ?"

"ನಾನು ಮುಟ್ಟುವ ಅವಶ್ಯಕತೆಯೇ ಇಲ್ಲ. ಗ್ರಂಥಗಳಾವುವೆಂದು ತಿಳಿಸಿದರೆ ಸಾಕು." ಪಕ್ಕದಲ್ಲಿಯೇ ಮಠದ ವಿದ್ವಾಂಸರಾದ ಗಂಗಾಧರ ಶಾಸ್ತ್ರಿಗಳಿದ್ದರು. ಅವರನ್ನು ಕರೆದು ಮೇಲೆ ಮರದ ಕಪಾಟಿನಮೇಲೆ ಒಂದು ಕಟ್ಟು ಓಲೆಯ ಪುಸ್ತಕಗಳ ಕಟ್ಟಿರಬೇಕಲ್ಲವೆ ? ತನ್ನಿ ಎಂದರು. ಅವರು ಹೋಗಿ ಒಂದು ಕಟ್ಟನ್ನು ತಂದರು. ಅದನ್ನು ಅವರೇ ಬಿಚ್ಚಿದರು. ಪುಸ್ತಕಗಳು ಹಳೆಯ ಕಾಲದ ಅಕ್ಷರಗಳವು. ಅವರಿಗೆ ಸರಾಗವಾಗಿ ಓದಲಾಗಲಿಲ್ಲ. ನನ್ನ ಕೈಗೆ ಕೊಡಲು ಬಂದರು. ನಾನು, "ಸ್ವಾಮಿ, ನಾನು ಮುಟ್ಟುವುದಿಲ್ಲ. ನೀವೇ ಹಿಡಿದುಕೊಳ್ಳಿ" ಎಂದೆ. ಹಾಗೆಯೇ ಓದಿದೆ.

ಅದರಲ್ಲಿ 'ಸಾಗಾರ ಧರ್ಮಾಮೃತ', 'ಪಂಪರಾಮಾಯಣ' ಮತ್ತು 'ಜೈನ ವ್ಯಾಕರಣ'–ಮೂರು ಓಲೆಯ ಪುಸ್ತಕಗಳಿದ್ದವು. ಓದಿ ಹೇಳಿದೆ. ಸ್ವಾಮಿಗಳು ಮತ್ತೊಂದನ್ನು ತರಿಸಿದರು. ಅದರಲ್ಲಿ ಐದು ಪುಸ್ತಕಗಳಿದ್ದವು. ಪುನಃ ಮತ್ತೊಂದು ಬಂತು. ಅದರಲ್ಲಿಯೂ ಮೂರು ಗ್ರಂಥಗಳು ಇದ್ದವು. ಅವನ್ನೆಲ್ಲ ಓದಿ ಹೇಳಿದೆ. ಕೊನೆಗೆ ನಾನು ಪುಸ್ತಕಗಳನ್ನು ಮುಟ್ಟುವ ಅಧಿಕಾರ ಬಂದಿತು. ರಾತ್ರಿ ೧೨ ಗಂಟೆಯಾಯಿತು. ಸ್ವಾಮಿಗಳಿಗೆ ನನ್ನಲ್ಲಿ ವಿಶ್ವಾಸವುಂಟಾಯಿತು. ತಮ್ಮಲ್ಲಿರುವ ಭಂಡಾರದ ಪ್ರಮಾಣವನ್ನು ವಿವರಿಸಿದರು. ಮಾರನೆಯ ದಿನದಿಂದ ಅದನ್ನು ಗಂಗಾಧರ ಶಾಸ್ತ್ರಿಗಳ ಸಮಕ್ಷಮದಲ್ಲಿ ಪರಾಮರ್ಶಿಸಲು ಅವಕಾಶ ಸಿಕ್ಕಿತು. ಆ ಸಂಗ್ರಹವು ಮಠದ ಮಹಡಿಯ ಮೇಲೆ ವಿಸ್ತಾರವಾದ ಕೊಠಡಿಯಲ್ಲಿ ಶೇಖರಿಸಲಾಗಿತ್ತು. ಸುಮಾರು ಹತ್ತು ಕಪಾಟುಗಳಲ್ಲಿ ೯೪೦ ಓಲೆಯಗರಿಯ ಪುಸ್ತಕಗಳಿದ್ದವು. ಎಲ್ಲವೂ ಬಹು ಅಂದವಾದ ವಿವಿಧ ಚಿತ್ರಗಳಿಂದ ಕೂಡಿದ ವೇಷ್ಟನಗಳಲ್ಲಿ ಸುತ್ತಿ ಸೂತ್ರಗಳಿಂದ ಬಂಧಿಸಲ್ಪಟ್ಟು ರಕ್ಷಿತವಾಗಿತ್ತು. ನಾನು ಅಲ್ಲಿ ೧೮ ದಿನಗಳು ಏಕಪ್ರಕಾರವಾಗಿ ಅವನ್ನು ಸಂಶೋಧಿಸಿದೆ. ಅನೇಕ ಪುಸ್ತಕಗಳಲ್ಲಿ ೨–೩ ಗ್ರಂಥಗಳಿದ್ದವು. ಅವನ್ನೆಲ್ಲಾ ಗುರುತಿಸಿ ಚೀಟಿಯನ್ನು ಬರೆದು ಪುಸ್ತಕಗಳ ಕಟ್ಟಿಯ ಮೇಲೆ ಅಂಟಿಸಿ ಮೊದಲನೆಯ ಬಾರಿಗೆ ಆ ಭಂಡಾರದ ಸೂಚಿಯನ್ನು ತಯಾರಿಸಿ ಅದರ ನಕಲೊಂದನ್ನು ಮಠಕ್ಕೆ ಕೊಟ್ಟೆ. ನಮ್ಮ ಕೋಶಾಗಾರದ ಉಪಯೋಗಕ್ಕೂ ತಂದೆ. ಪುಸ್ತಕಗಳ ಅಸ್ತಿತ್ವವನ್ನೇ ಕೊಡಲು ನಿರಾಕರಿಸಿದ ಸ್ವಾಮಿಗಳು ಕೊನೆಗೆ ನಮ್ಮ ಭಂಡಾರದಲ್ಲಿಲ್ಲದ ೬ ಅಪೂರ್ವ ಗ್ರಂಥಗಳನ್ನು ಎರವಲಾಗಿ ಕೊಟ್ಟರು. ನಾವು ಅದನ್ನು ಪ್ರತಿ ಮಾಡಿಸಿಕೊಂಡು ಮೂಲಪ್ರತಿಗಳನ್ನು ಅವರಿಗೆ ಹಿಂತಿರುಗಿಸಿದ್ದೇವೆ. ಅವುಗಳಲ್ಲಿ ೨–೩ ನಮ್ಮ ಭಂಡಾರದಿಂದ ಸಂಶೋಧಿತವಾಗಿ ಮುದ್ರಿತವಾಗಿದೆಯೆಂಬುದನ್ನು ತಿಳಿಸಲು ಸಂತೋಷವಾಗುತ್ತದೆ.

ದಕ್ಷಿಣ ಕನ್ನಡದಲ್ಲಿ ವಿದ್ವಾಂಸರಾದವರು ತಾಡ ಓಲೆಯ ಗ್ರಂಥವನ್ನು ರಕ್ಷಿಸುವುದರಲ್ಲಿ ಅತ್ಯಂತ ಎಚ್ಚರಿಕೆ ವಹಿಸುತ್ತಾರೆ. ಈಗ ವಿದ್ವನ್ನಿಕೇತನಗಳಲ್ಲಿ ಸಾಮಾನ್ಯವಾಗಿ ಅವನ್ನು ಹೊರಗೆ ತೆಗೆಯುವುದು ವರ್ಷಕ್ಕೊಂದು ಸಲ ಮಾತ್ರ. ಅವನ್ನು ಹೊರಕ್ಕೆ ತೆಗೆಯುವುದು ಸರಸ್ವತೀ ಪೂಜೆಯ ಕಾಲದಲ್ಲಿ ಮಾತ್ರ. ಬಾಕಿ ಕಾಲದಲ್ಲಿ ಅವುಗಳು ಸುರಕ್ಷಿತವಾಗಿರುವುದಕ್ಕೆ ಅವರು ತೆಗೆದುಕೊಳ್ಳುವ ಕಾರ್ಯಕ್ರಮ ಬಹು ಆಶ್ಚರ್ಯಕರ. ಕಲ್ಲಿನ ಕಪಾಟುಗಳಲ್ಲಿ ಒಂದು ಪದರ ಮೆಣಸು ಮತ್ತೊಂದು ಪದರ ಓಲೆಯ ಪುಸ್ತಕಗಳನ್ನು ಜೋಡಿಸಿ ಪುನಃ ಮೆಣಸಿನ ಕಾಳಿನಿಂದ ಆಚ್ಛಾದಿಸಿ ಅವುಗಳ ಮೇಲೆ ಮರದ ಹಲಗೆಗಳನ್ನು ಹೊದಿಸಿ ಅವುಗಳನ್ನು ಹುಳು ಹಂಬಲು ಶೈತ್ಯಗಳಿಂದ ರಕ್ಷಿಸುವ ಕ್ರಮವು ೨–೩ ಸ್ಥಳಗಳಲ್ಲಿ ನಮ್ಮ ಕಣ್ಣಿಗೆ ಬಿದ್ದಿರುವುದು ಶ್ಲಾಘನೀಯವಾಗಿದೆ. ಇಂತಹ ಸಂಗ್ರಹಗಳಿಂದ ಪ್ರತಿಗಳನ್ನು ಹೊರಗೆ ತೆಗೆಸುವುದು ಬಹು ಪ್ರಯಾಸಕರ.

ಮೂಡಬಿದರೆಯಲ್ಲಿ ವಿಶೇಷವಾಗಿ ಗಮನಿಸಬೇಕಾದುದು "ಧವಳಿ" ಗ್ರಂಥಗಳ ಸಂರಕ್ಷಣೆ. ಇವು ಬಹು ಭದ್ರವಾದ ಕೋಣೆಯಲ್ಲಿ ಒಂದರಲ್ಲೊಂದರಂತಿರುವ ಏಳೆಂಟು ಪೆಟ್ಟಿಗೆಗಳಲ್ಲಿ ಸಂರಕ್ಷಿಸಲ್ಪಟ್ಟಿವೆ. ಅದನ್ನು ಹೊರಕ್ಕೆ ತೆಗೆಯುವ ಅವಕಾಶವೇ ಬಹು ಕಡಿಮೆ. ಜೈನ ಬಾಂಧವರು ಅಲ್ಲಿಗೆ ಬಂದಾಗ ಅದನ್ನು ಹೊರಗಿನಿಂದಲೇ ದರ್ಶನ ಮಾಡಿಕೊಂಡು ಹೋಗುವುದು ವಾಡಿಕೆ. ನಾನು ಅಲ್ಲಿಗೆ ಹೋದಾಗ ಅದೃಷ್ಟವಶಾತ್ ಅಲ್ಲಿಯ ಧರ್ಮದರ್ಶಿಗಳ ವಿಶೇಷ ಕೃಪೆಯಿಂದ ಗ್ರಂಥವನ್ನು ಪ್ರತ್ಯಕ್ಷ ಸಂದರ್ಶಿಸುವ ಸೌಲಭ್ಯ ದೊರೆಯಿತು. ಓಲೆಗರಿಗಳ ಗ್ರಂಥಗಳ ದೃಷ್ಟಿಯಿಂದ ಇದಕ್ಕೆ ಒಂದು ವಿಶೇಷ ಸ್ಥಾನವಿದೆ. ಇತರ ಓಲೆಗರಿಗಳ ಗ್ರಂಥದಂತೆ ಇವನ್ನು ಕಬ್ಬಿಣದ ಕಂಟದಿಂದ ಕೊರೆ (ಕಂಡರಿಸು) ದುದಲ್ಲ. ಓಲೆಯುಗರಿಯ ಮೇಲೆ ಮಸಿಯಿಂದ ಲಿಖಿತವಾಗಿದೆ. ೧೨ನೆಯ ಶತಮಾನದ ಕನ್ನಡ ಅಕ್ಷರಗಳಲ್ಲಿ ಬರೆದಿದ್ದರೂ ಇಂದಿಗೂ ಹೊಚ್ಚ ಹೊಸದಾಗಿದೆ. ಆ ಭಾಗದಲ್ಲಿ ಇದರ ಏಕದೇಶ ಭಾಗ ಮಾತ್ರ ಸೋಲಾಪುರದಲ್ಲಿ ಮುದ್ರಿತವಾಗಿತ್ತು. ಈಗ ಸಂಪೂರ್ಣ ಪ್ರತಿ ಮುದ್ರಿತವಾಗಿ ಪ್ರಕಟವಾಗಿದೆ. ಮೂಡಬಿದರೆಯ ಮಠದ ಪ್ರತಿಗಳು ಬಹು ಪ್ರಾಚೀನ ಕಾಲದಲ್ಲಿ ಲಿಖಿತವಾಗಿರುವುದರಿಂದ ಸಂಶೋಧನಾ ದೃಷ್ಟಿಯಿಂದ ಒಳ್ಳೆಯ ಪಾಠಗಳನ್ನು ನಿಷ್ಕರ್ಷಿಸುವುದಕ್ಕೆ ಬಹಳ ಪ್ರಯೋಜನವಾಗಿದೆ. ಅಲ್ಲದೆ ಲಿಪಿಶಾಸ್ತ್ರದ ಬೆಳವಣಿಗೆಯ ದೃಷ್ಟಿಯಿಂದಲೂ ಇವು ಹೆಚ್ಚು ಬೆಳಕನ್ನು ಬೀರಬಲ್ಲವು. ಇಲ್ಲಿರುವ ವೇಷ್ಟನಗಳು ಪ್ರತ್ಯೇಕ ಅಭ್ಯಾಸಕ್ಕೆ ವಿಷಯವಾಗುತ್ತವೆ. ಅವುಗಳಲ್ಲಿ ಜೈನ ಧರ್ಮಗಳಿಗೆ ಸಂಬಂಧಪಟ್ಟ ಸಂದರ್ಭಗಳೂ ಚಿತ್ರಿತವಾಗಿವೆ. ಅನೇಕ ಗ್ರಂಥಗಳ ಮತ್ತು ಅವುಗಳ ಮರದ ಕಟ್ಟುಗಳ ಮೇಲೆಯೂ ವರ್ಣರಂಜಿತ ಜ್ಯಾಮಿತೀಯ ಮತ್ತು ಧಾರ್ಮಿಕ ಚಿತ್ರಗಳು ಬರೆಯಲ್ಪಟ್ಟಿವೆ. ಇವುಗಳನ್ನು ಪ್ರತ್ಯೇಕ ಛಾಯಾಚಿತ್ರಗಳ ಮೂಲಕ ಶೇಖರಿಸಿದರೆ ಬಹು ಬೋಧಪ್ರದವಾಗಿರುತ್ತವೆ. ಇವುಗಳೊಡನೆ ಶ್ರವಣಬೆಳಗೊಳದ ಚಾರುಕೀರ್ತಿ ಸ್ವಾಮಿ ಮಠದ ಭಂಡಾರದ ಹಸ್ತಲಿಖಿತ ಗ್ರಂಥಗಳನ್ನು ಅಭ್ಯಾಸ ಮಾಡಿದರೆ ಹೆಚ್ಚು ಪ್ರಯೋಜನವುಂಟು. ಕನ್ನಡ ನಾಡಿನ ಬೇರೆ ಬೇರೆ ಸಂಗ್ರಹಗಳನ್ನು ಒಟ್ಟಿಗೆ ಸಂಗ್ರಹಿಸಿ ಇಂಗ್ಲೀಷಿನಲ್ಲಿರುವ Afruet ನ Catalogues Catalagorum (Catalogue of Catalogues) ಮಾದರಿಯ ಒಂದು ಸಮಗ್ರ ಸೂಚಿಯನ್ನು ತಯಾರಿಸಿದರೆ ಬಹು ಪ್ರಯೋಜನವಾದೀತು.

---

# ಕೃತಿದೋಷ ವಿಚಾರ

—ಟಿ. ಕೇಶವ ಭಟ್ಟ

'ಕೃತಿಯಲ್ಲಿ ಒಂದು ತಪ್ಪೂ ಇರಬಾರದು' ಎಂಬುದು ಶಿಷ್ಟ ಕವಿಗಳ, ಲೇಖಕರ ಹಾಗೂ ಗ್ರಂಥ ಸಂಪಾದಕರ ಆಶಯ. ಕೆಲವು ಕಡೆ 'ಈ ಕೃತಿಯಲ್ಲಿ ಇದು ತಪ್ಪಲ್ಲ ಅಥವಾ ತಪ್ಪಾಗಿದ್ದರೂ ಕ್ಷಮ್ಯ' ಎಂದುಕೊಂಡಿರಬಹುದಾದ ಸಂದರ್ಭಗಳೂ ಇರುತ್ತವೆ. ತನ್ನ ರಚನೆಯಲ್ಲಿ ಒಂದು ತಪ್ಪೂ ಇಲ್ಲ ಎನ್ನಬೇಕಾದರೆ ಎಂಟೆದೆ ಬೇಕು. ಕವಿ ಆಂಡಯ್ಯನು 'ತಪ್ಪೊಂದುಂ ತಲೆದೋರದಂತೆ ಪಲರೆಲ್ಲರ್ ತಿರ್ದಿದೀ ಕಬ್ಬಂ' ಎಂದು ತನ್ನ 'ಕಬ್ಬಿಗರ ಕಾವ'ದಲ್ಲಿ ಹೇಳಿಕೊಂಡಿದ್ದಾನೆ. ಇಲ್ಲಿ ಕೂಡ, ಒಂದು ತಪ್ಪು ಕೂಡ ಕಾಣಿಸದ ಹಾಗೆ ಹಲವರೆಲ್ಲ ತಿದ್ದಿರುವುದಾಗಿ ಹೇಳಿದ್ದರಿಂದ, ಮತ್ತೆಯೂ ಉಳಿದಿರಬಹುದಾದ ತಪ್ಪನ್ನು ಆ ತಿದ್ದಿದ ವಿದ್ವಾಂಸರ ತಲೆಗೇ ಹೊರಿಸಿರುವುದು ಕಂಡುಬರುತ್ತದೆ. ಕನ್ನಡದ ವಚೋವಿಚಕ್ಷಣನಾದ ಕೇಶಿರಾಜನು 'ಶಬ್ದಮಣಿದರ್ಪಣ' ವ್ಯಾಕರಣ ಗ್ರಂಥವನ್ನು ಬರೆಯುತ್ತ ಹೀಗೆಂದಿದ್ದಾನೆ—

ಅವಧರಿಪುದು ವಿಬುಧರ್ ದೋ
ಷವಿದರೊಳೇನಾನುಮುಳ್ಳೊಡಂ ಪ್ರಿಯದಿಂ ತಿ
ರ್ದುವುದು ಗುಣಯುಕ್ತಮುಂ ದೋ
ಷವಿದೂರಮುಮಾಗೆ ಮೆಚ್ಚಿ ಕೈಕೊಳ್ವುದಿದಂ (ಪೀಠಿಕೆ, ಪದ್ಯ ೪)

ಈ ಕವಿಗೆ ತನ್ನ ಗ್ರಂಥ ಪೂರ್ಣ ನಿರ್ದೋಷವೆಂಬ ಭರವಸೆಯಿಲ್ಲ. 'ರಸರತ್ನಾಕರ'ದಲ್ಲಿ ಕವಿ ಸಾಳ್ವನು ತನ್ನ ಕೃತಿಯ ದೋಷಗಳನ್ನು ತಿದ್ದುವವರ ಗುಣವನ್ನು ಪ್ರಶಂಸಿಸಿದ್ದಾನೆ—

ಅವಗುಣಮಿದರೊಳಗೇನಾ
ನುವುಳ್ಳೊಡಂ ನಿಮ್ಮ ಗುಣಮನುರೆ ಮೆರೆಸಲ್ ತಿ
ರ್ದುವುದು ಬಹುಶ್ರುತರೆನಿಸಿದ
ಕವಿಗಳ್ ಬುಧರೊಲ್ದು ಗುಣಕೆ ಪುರುಡಿಪರೊಳರೇ ॥

ಇವನ ಅಭಿಪ್ರಾಯದಂತೆ ಕೃತಿದೋಷವನ್ನು ತೋರಿಸುವುದು, ತಿದ್ದುವುದು ವಿದ್ವಜ್ಜನರಲ್ಲಿರಬೇಕಾದ ಹಿರಿಯ ಗುಣ. ಇಲ್ಲದ ದೋಷವನ್ನು ಆರೋಪಿಸುವುದು ಮತ್ಸರದ ಲಕ್ಷಣ. ಕೃತಿಯಲ್ಲಿ ಒಂದೊಂದು ದೋಷವಿದ್ದರೆ ಗಣನೀಯವಲ್ಲ ಎನ್ನುವವರಿದ್ದಾರೆ. ಕಾಳಿದಾಸನು ಒಂದೆಡೆ ಹೀಗೆಂದಿದ್ದಾನೆ—

ಏಕೋ ಹಿ ದೋಷೋ ಗುಣಸನ್ನಿಪಾತೇ
ನಿಮಜ್ಜತೀಂದೋಃ ಕಿರಣೇಷ್ವಿವಾಂಕಃ (ಕುಮಾರಸಂಭವ, ಸರ್ಗ ೧, ಪದ್ಯ ೩)

ಗುಣಗಳ ಸಮೂಹವಲ್ಲಿ ಒಂದೇ ಒಂದು ದೋಷವಿದ್ದರೆ ಅದು ಚಂದ್ರನ ಬೆಳಕಿನಲ್ಲಿ ಆತನ ಕಳಂಕದಂತೆ ಮುಳುಗಿಹೋಗುತ್ತದೆ–ಎಂದಿದ್ದಾನೆ. ಇದು ಕಾವ್ಯದ ಬಗೆಗೆ ಹೇಳಿದ ಮಾತಲ್ಲವೆಂಬುದು ನಿಜ. ಕಾಳಿದಾಸನೇ ಇನ್ನೊಂದೆಡೆ ಹೀಗೆಂದಿದ್ದಾನೆ–

ತ್ಯಾಜ್ಯೋ ದುಷ್ಟಃ ಪ್ರಿಯೋ ಪ್ಯಾಸೀದಂಗುಲೀವೋರಗಕ್ಷತಾ

(ರಘುವಂಶ, ಸರ್ಗ ೧, ಶ್ಲೋಕ ೨೮)

ಅಂದರೆ, ಹಾವು ಕಚ್ಚಿದ ಬೆರಳಿನಂತೆ, ದುಷ್ಟನು ತ್ಯಾಜ್ಯನು. ಇದರಿಂದ ತ್ಯಾಜ್ಯವಾದುದರಲ್ಲಿ ತರತಮವಿದೆಯೆಂದಾಯಿತು. ಬೆಳ್ದಿಂಗಳು ಎಂಬ, ಚಂದ್ರನ ಪ್ರಕಾಶಗುಣ ಸಮುದಾಯದಲ್ಲಿ ಅವನ ಕಳಂಕ ಅಲಕ್ಷ್ಯ. ಆದರೆ ಶಿಷ್ಟರು ಎಷ್ಟೇ ಮಂದಿಯಿರಲಿ, ಅವರ ನಡುವೆ ದುಷ್ಟನು ಒಬ್ಬನಿದ್ದರೂ ಆತನು ತ್ಯಾಜ್ಯನು. ಕೃತಿಯಲ್ಲಿ ದೋಷ ಎಂಬುದು ಈ ದುಷ್ಟನಂತೆ. ಕೃತಿದೋಷವನ್ನು ಅಲ್ಪವಾದುದೆಂದು ಕಡೆಗಣಿಸಬಾರದು—ಎಂಬುದೇ ಲಾಕ್ಷಣಿಕರ ಮತ. ಕವಿರಾಜಮಾರ್ಗದಲ್ಲಿ ಹೀಗೆ ಹೇಳಿದೆ—

ಅವಗುಣಮಿನಿತಾದೊಡಮಾ
ಕವಿತಾಬಂಧಮನಶೇಷಮಂ ದೂಷಿಸುಗುಂ
ಸವಿಳಾಸಲೋಲಲೋಚನ
ವಿವರಮನೆಡೆವೆತ್ತ ಕಸದವೋಲನವರತಂ (೧–೪೩)

ಕವಿತಾಬಂಧವೆಂಬುದು ಕಣ್ಣಾದರೆ, ದೋಷವೆಂಬುದು ಆ ಕಣ್ಣಿಗೆ ಬಿದ್ದ ಕಸ. ಅದು ಎಷ್ಟು ಚಿಕ್ಕದೇ ಆಗಿರಬಹುದು, ಕಣ್ಣಿಗೆ ಬಾಧಕವೇ ಸರಿ–ಎಂದಿಲ್ಲಿ ಅಭಿಪ್ರಾಯ. ಕನ್ನಡ ಕವಿಗಳು ಲಾಕ್ಷಣಿಕರು ಈ ಅಭಿಪ್ರಾಯದ ಮಾರ್ಗವನ್ನು ಮಾನ್ಯ ಮಾಡಿದ್ದಾರೆ. ಈ ಹಿನ್ನೆಲೆಯಲ್ಲಿ ಕನ್ನಡದ ಮೂರು ಕೃತಿಗಳಲ್ಲಿ ಬಂದಿರುವ ಒಂದೊಂದು ತಪ್ಪನ್ನು ಇಲ್ಲಿ ವಿಮರ್ಶೆಗೆ ಒಳಪಡಿಸಲಾಗಿದೆ. ಈ ತಪ್ಪು ಕೂಡ ಮೂಲಗ್ರಂಥಕಾರನದಲ್ಲ, ಗ್ರಂಥಸಂಪಾದಕರು ಹಾಗೂ ಲೇಖಕರು ಪರಂಪರೆವಿಡಿದು ಮಾಡಿಕೊಂಡು ಬರುತ್ತಿರುವವು. ಇನ್ನು ಮುಂದಿನವರು ಈ ತಪ್ಪನ್ನು ಮಾಡದಿರಲಿ ಎಂಬುದಕ್ಕಾಗಿ ಈ ನಿರೂಪಣೆ—

೧. ರುದ್ರಭಟ್ಟನ 'ಜಗನ್ನಾಥ ವಿಜಯ'ದ ಒಂದು ಪದ್ಯ–ಆ. ೧, ಪದ್ಯ ೧೭.

ಈ ತೆಱದಿಂ ಬುಧರ್ ಪೊಗೞ್ದು ಮತ್ಕೃತಿಯುಂ **ನೆಱೆ ಶಾರದಾಭ್ರ ಚಂ-**
**ದ್ರಪ್ರಕಟ** ರುದ್ರ ಕೃಷ್ಣಕಥೆವೇೞ್ಪೆನೆ ಕಾವ್ಯಸಮಾಧಿಯಿಂ ಪರಂ-
ಜ್ಯೋತಿ ಮುಕುಂದನೆನ್ನ ಬಗೆಯೊಳ್ ನಿಲೆ ನಿರ್ಮಳ ತತ್ತ್ವಬೋಧಮು-
ದ್ಯೋತಿಪುದೆಂಬುದಂ ಬಯಸಿ ಪೇೞಲೊಡರ್ಚಿದೆನೀ ಪ್ರಬಂಧಮಂ.

ರುದ್ರಭಟ್ಟನ 'ಜಗನ್ನಾಥ ವಿಜಯ' ೧೯೦೪ರಲ್ಲಿ ಎಸ್. ಜಿ. ನರಸಿಂಹಾಚಾರ್ಯರಿಂದ ಶೋಧಿತವಾಗಿ ಮೊತ್ತಮೊದಲು ಮುದ್ರಿತವಾಗಿದೆ. ಅನಂತರ, ೧೯೨೩ರಲ್ಲಿ ಡಾ॥ ಆರ್. ಶಾಮಶಾಸ್ತ್ರಿಗಳಿಂದ ಸಂಪಾದಿತವಾಗಿ ಪ್ರಕಟವಾಗಿದೆ. ೧೯೬೬ರಲ್ಲಿ ಎಂ. ಆರ್. ವರದಾಚಾರ್ಯರ ಗದ್ಯಾನುವಾದದೊಡನೆ ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಾಶಿತವಾಗಿದೆ. ಮೇಲಿನ ಎರಡೂ (೧೯೨೩, ೧೯೬೬) ಪ್ರಕಾಶನಗಳ ಪಾಠ ಪ್ರಕಾರ ರುದ್ರಭಟ್ಟನ ಬಿರುದು 'ಶಾರದಾಭ್ರಚಂದ್ರಾತಪ' ಎಂದಾಗುತ್ತದೆ. ಇದು ಸರಿಯೆ ? ಎಂಬುದು ವಿಚಾರಣೀಯ.

ಕೆಲವು ವರ್ಷಗಳ ಕೆಳಗೆ ಕನ್ನಡ ಸಾಹಿತ್ಯ ಪರಿಷತ್ತಿನ ಆಶ್ರಯದಲ್ಲಿ ರುದ್ರಭಟ್ಟನ ಕವಿ–ಕಾವ್ಯ ವಿಮರ್ಶೆಯ ಪ್ರೌಢೋಪನ್ಯಾಸಗಳು ಏರ್ಪಟ್ಟಿದ್ದವು. ವಕ್ತಾರರೊಬ್ಬರು ತಮ್ಮ ಭಾಷಣದಲ್ಲಿ 'ರುದ್ರಭಟ್ಟನ ಬಿರುದು ಶಾರದಾಭ್ರ ಚಂದ್ರಾತಪ' ಎಂದು ಹೇಳಿದಾಗ, ಅದೇ ಸಭೆಯಲ್ಲಿದ್ದ ನಾನು– 'ಅದು ಹಾಗಲ್ಲ, ಕೃತಿ ಶಾರದಾಭ್ರ ಚಂದ್ರಾತಪ ಎಂದಾಗಬೇಕು' ಎಂಬುದಾಗಿ ತಿದ್ದುಪಡಿ ಸೂಚಿಸಿದೆ. ಅದನ್ನವರು ಚರ್ಚಿಸದೆ ಅಲ್ಲೇ ಒಪ್ಪಿಕೊಂಡರು. ಅಲ್ಲಿ ಹೀಗೆ ಆಕ್ಷೇಪಿಸಲು ನನಗೆ ಆಧಾರ ವೇನೆಂದು ಯಾರೂ ಪ್ರಶ್ನಿಸಬಹುದು. ಹಿಂದೆ 1942ರಲ್ಲಿ ವಿದ್ವಾನ್ ಪರೀಕ್ಷೆಗೆ ಪಠ್ಯವಾಗಿದ್ದ 'ಜಗನ್ನಾಥ ವಿಜಯ' ಕಾವ್ಯದಲ್ಲಿ ಅಂದೇ ಕಂಠಪಾಠ ಮಾಡಿ, ಇಂದಿಗೂ ನೆನಪು ಇರುವ ಪದ್ಯಗಳಲ್ಲಿ ಅದೂ ಒಂದು. ಆದುದರಿಂದಲೇ ತಪ್ಪನ್ನು ಆಕ್ಷೇಪಿಸಲು ಧೈರ್ಯ. ಅನಂತರ ಈ ವಿಷಯದಲ್ಲಿ ಮಾತೆತ್ತುವ ಸಂದರ್ಭವಿರಲಿಲ್ಲ. ಇದೀಗ ಲೋಚನ. ದ್ವಿತೀಯ ಸಂಪುಟದ ಪ್ರಥಮ ಸಂಚಿಕೆಯಲ್ಲಿ ಡಾ॥ ಕೆ. ಜಿ. ಶಾಸ್ತ್ರಿಗಳು ಬರೆದ 'ರುದ್ರಭಟ್ಟನ ಪರಂಪರಾ ಪ್ರಜ್ಞೆ' ಎಂಬ ಲೇಖನದಲ್ಲಿ ಅದೇ ಪದ್ಯದ ಉಲ್ಲೇಖವಿದೆ—'ನೆಜಿ಼ ಶಾರದಾಭ್ರ ಚಂದ್ರಾತಪ ರುದ್ರ' ಎಂಬುದಿದೆ. ಆದುದರಿಂದ ರುದ್ರಭಟ್ಟನ ಈ ಬಿರುದಿನ ರೂಪಸ್ಪಷ್ಟೀಕರಣ ಅವಶ್ಯವಾಯಿತು. ಮೊದಲು ಇದರ ಅರ್ಥದ ಕಡೆಗೆ ಲಕ್ಷ್ಯವಿಡೋಣ—

'ಶಾರದ' ಎಂದರೆ ಶರತ್ಕಾಲದ. 'ಅಭ್ರ' ಎಂದರೆ ಮೋಡ ಅಥವಾ ಆಕಾಶ. 'ಚಂದ್ರಾತಪ' ಎಂದರೆ ಬೆಳ್ದಿಂಗಳು. ಪಂಡಿತ ವರದಾಚಾರ್ಯರು "ಶರತ್ಕಾಲದ ಮೋಡದ ಮೇಲೆ ಬೀಳುವ ಬೆಳುದಿಂಗಳಂತೆ ಇರುವ" ಎಂದು ಅರ್ಥ ಬರೆದಿದ್ದಾರೆ. ಇದು ಉಪಮೆಯಾದರೆ, ಇಲ್ಲಿ ಸಾಮಾನ್ಯಧರ್ಮ ಯಾವುದು ? ಕವಿಭಾವವೇನೂ ಇಲ್ಲಿ ಹೊಳೆಯುವುದಿಲ್ಲ. ಇಂತಹುದೇ ಬೇರೊಂದು ಉದಾಹರಣೆ ಕೊಡಬಹುದು. ಕವಿ ಲಕ್ಷ್ಮೀಶನಿಗೆ 'ಕರ್ಣಾಟ ಕವಿ ಚೂತವನ ಚೈತ್ರ' ಎಂಬ ಬಿರುದಿದೆಯಷ್ಟೆ ? ಇದರಲ್ಲಿ 'ಕರ್ಣಾಟ ಕವಿ' ಎಂಬುದನ್ನು ಬಿಟ್ಟು ಕೇವಲ "ಚೂತವನ ಚೈತ್ರ" ಎಂಬುದನ್ನು ಅತನ ಬಿರುದೆಂದು ಹೇಳಿಕೊಂಡರೆ ಅರ್ಥವು ಅಪೂರ್ಣ, ಅಸ್ಪಷ್ಟ ಮತ್ತು ಪ್ರಕೃತಕ್ಕೆ ಹೊಂದುಗೆಯಾಗದಲ್ಲವೆ ? 'ಕರ್ಣಾಟ ಕವಿ ಚೂತವನ ಚೈತ್ರ' ಎಂದಾಗ "ಕನ್ನಡ ಕವಿಗಳೆಂಬ ಮಾಮರಗಳ ವನಕ್ಕೆ

ವಸಂತೋದಯ" ಎಂದು ಅರ್ಥ ಹೊಮ್ಮುವುದು. ಅರ್ಥಪುಷ್ಟಿಯಿಂದ ಕವಿ ಪ್ರತಿಭೆಯೆಂಬುದು ವೇದ್ಯವಾಗುವುದು. ಹಾಗೆಯೇ 'ಕೃತಿಶಾರದಾಭ್ರ ಚಂದ್ರಾತಪ' ಎಂಬಲ್ಲಿ ರೂಪಕದ ಸೊಬಗಿನಿಂದ ಅರ್ಥಪುಷ್ಟಿಯಾಗುತ್ತದೆ. ಕೃತಿಯೆಂಬ ಶರತ್ಕಾಲದ ಆಕಾಶಕ್ಕೆ ಬೆಳ್ದಿಂಗಳಾಗಿರುವ ಎಂಬ ತಾದ್ರೂಪ್ಯರೂಪಕ ಇಲ್ಲಿದೆ. ಕವಿಭಾವ ವಿಶದವಾಗಿದೆ. ಇದೇ ಸರಿಯೆಂಬುದರಲ್ಲಿ ಸಂದೇಹವೂ ಉಳಿಯಲಾರದು. ಕರ್ಣಾಟಕ ಕವಿಚರಿತೆ ಪ್ರಥಮ ಸಂಪುಟದಲ್ಲಿ (ಪ್ರ.ಮು. ೧೯೨೪) – "ಇವನಿಗೆ ಕೃತಿಶಾರದಾಭ್ರ ಚಂದ್ರಾತಪ. ಕವಿರಾಜ ಎಂಬ ಬಿರುದುಗಳಿದ್ದಂತೆ ತೋರುತ್ತದೆ" ಎಂದಿದೆ. ಇದರಿಂದ ಆರ್. ನರಸಿಂಹಾಚಾರ್ಯರು ಕವಿಚರಿತೆ ಬರೆಯಲು ಉಪಯೋಗಿಸಿದ ಪ್ರತಿಯಲ್ಲಿ 'ಕೃತಿ ಶಾರದಾಭ್ರ ಚಂದ್ರಾತಪ' ಎಂತಲೇ ಇದ್ದಿತೆಂದು ಭಾಸವಾಗುತ್ತದೆ. ಡಾ॥ ಶಾಮಶಾಸ್ತ್ರಿಗಳಿಂದ ಸಂಪಾದಿತವಾದ ಆವೃತ್ತಿಯಲ್ಲಿ ಮುದ್ರಿತವಾಗಿರುವ 'ಪ್ರಥಮ ಮುದ್ರಣದ ಉಪೋದ್ಘಾತ'ದಲ್ಲಿ 'ಕೃತಿಶಾರದಾಭ್ರ ಚಂದ್ರಾತಪ' ಎಂಬ ಉಲ್ಲೇಖವೇ ಇದೆ. ಇದರಿಂದ ಮೂಲಪ್ರತಿಯಲ್ಲಿ ರುದ್ರಭಟ್ಟನ ಬಿರುದಾಗಿ 'ಕೃತಿಶಾರದಾಭ್ರ ಚಂದ್ರಾತಪ' ಎಂತಲೇ ಇದ್ದಿತೆಂದೂ ಅನಂತರದ ಆವೃತ್ತಿಗಳಲ್ಲಿ 'ಕೃತಿ'ಗೆ ಸ್ಥಾನಿಯಾಗಿ 'ನೆಜಿ' ಸೇರಿಕೊಂಡು ವಿದ್ವಾಂಸರ ಲೇಖನಗಳಲ್ಲಿ, ಭಾಷಣಗಳಲ್ಲಿ ಹೀಗೆ ಎಲ್ಲೆಲ್ಲಿಯೂ ತಪ್ಪು ಹರಿದುಬರುತ್ತಿದೆಯೆಂಬುದು ಸ್ಪಷ್ಟವಾಗುತ್ತದೆ.

೨. ಪಂಪನ ಆದಿಪುರಾಣದಲ್ಲಿ ಮೊದಲನೆ ಪದ್ಯ—

ಶ್ರೀದೇವೇಂದ್ರ ಮುನೀಂದ್ರ ವಂದಿತ ಗುಣವ್ರಾತಂ, ಜಗತ್‌ಸ್ವಾಮಿ, ಸಂ-
ದಾದಿ ಬ್ರಹ್ಮನಗಾಧ ಬೋಧನಿಲಯಂ, ದುರ್ವಾರ ಸಂಸಾರ ವಿ-
ಚ್ಛೇದೋಪಾಯ ನಿಯುಕ್ತಸೂಕ್ತಿ ವೃಷಮಾರ್ಗಾಗ್ರೇಸರಂ, ಪಾಪಹೃತ್
ಪಾದಾಬ್ಜಂ ದಯೆಗೆಯ್ವನಕ್ಕೆಮಗೆ ಮುಕ್ತಿಶ್ರೀ ಸುಖಾವಾಪ್ತಿಯಂ

ಸಮರ್ಥವಾದ ಗ್ರಂಥಸಂಪಾದನೆಯಲ್ಲಿ ಹೊಸ ಹೆಜ್ಜೆಗುರುತುಗಳನ್ನು ಮಾಡಿರುವ ಡಾ॥ ಎಲ್. ಬಸವರಾಜು ಅವರಿಂದ ಸಂಪಾದಿತವಾಗಿ ೧೯೭೭ರಲ್ಲಿ ಪ್ರಥಮ ಮುದ್ರಣವಾಗಿ ಪ್ರಕಾಶಿತವಾದ ಆದಿಪುರಾಣ ಕಾವ್ಯದಲ್ಲಿ ಮುದ್ರಿತವಾಗಿರುವ ಆ ಪದ್ಯವನ್ನು ಇಲ್ಲಿ ಉದಾಹರಿಸಿದೆ. ಇಲ್ಲಿ 'ದಯೆಗೆಯ್ವನಕ್ಕೆ' ಎಂಬ ರೂಪ ಸರಿಯೆ ? ಕುಂದಣಗಾರರಿಂದ ಸಂಪಾದಿತವಾದ ಆದಿಪುರಾಣದಲ್ಲಿ (೧೯೫೩) 'ದಯೆ-ಗೆಯ್ವನಕ್ಕೆ' ಎಂಬ ವ್ಯಾಕರಣಶುದ್ಧರೂಪವನ್ನು ಸ್ವೀಕೃತ ಪಾಠವಾಗಿಟ್ಟುಕೊಂಡು, ಮೂಡುಬಿದರೆಯ ಪ್ರತಿಯಲ್ಲಿರುವ 'ದಯೆಗೆಯ್ವನಕ್ಕೆ' ಎಂಬ ಅಶುದ್ಧಪಾಠವನ್ನು ಅಡಿಯಲ್ಲಿ ಕೊಡಲಾಗಿದೆ. ಆದರೆ ಡಾ॥ ಎಲ್. ಬಸವರಾಜು ಅವರು 'ದಯೆಗೆಯ್' ಎಂಬ ರೂಪವನ್ನು ಸ್ವೀಕರಿಸಿ ಇಟ್ಟುಕೊಂಡಿದ್ದಾರೆ. ಪಾಠಾಂತರವಿರುವುದನ್ನು ಕಾಣಿಸಿಲ್ಲ. 'ದಯೆಗೆಯ್' ಏಕೆ ಸರಿ ? 'ದಯೆಗೆಯ್' ಏಕೆ ತಪ್ಪು ? ತಿಳಿಸುವುದು

ಅವಶ್ಯ. 'ದಯಾ' ಎಂಬುದು ಆಕಾರಾಂತ ಸ್ತ್ರೀಲಿಂಗ ಶಬ್ದ. ಸಮಸಂಸ್ಕೃತವಾಗುವಾಗ 'ವಿದಾತಃ ಸ್ತ್ರಿಯಾಂ' ಎಂಬ ಶಬ್ದಾನುಶಾಸನ ಸೂತ್ರದ ಪ್ರಕಾರ, 'ದಯೆ' ಎಂದಾಗುತ್ತದಲ್ಲದೆ 'ದಯ' ಎಂದಾಗುವುದಿಲ್ಲ. ಆಧುನಿಕರ ವಾಕ್ಪ್ರಯೋಗದಲ್ಲಿ 'ದಯಮಾಡಿ ಬನ್ನಿ' ಮುಂತಾಗಿ ಇರುವುದು ನಿಜ. 'ದಯವಿಲ್ಲದ ಧರ್ಮವೇವುದಯ್ಯ' ಎಂದು ವಚನಪ್ರಯೋಗವೂ ಇದೆ. ಆದರೆ ಇದು ಸಾಧುಪ್ರಯೋಗವಲ್ಲ. ಪಂಪನಂಥವರು ಬಳಸಿರಲು ಸಾಧ್ಯವಿಲ್ಲ. 'ದಯೆಗೆಯ್ವನಕ್ಕೆ' ಎಂಬ ವ್ಯಾಕರಣಶುದ್ಧ ರೂಪವನ್ನೆ ಪಂಪನ ಪ್ರಯೋಗವೆಂದು ನಾವು ಮಾನ್ಯ ಮಾಡುವುದೇ ಲೇಸು. ಶ್ರೀ ಕೆ. ಎಲ್. ನರಸಿಂಹಶಾಸ್ತ್ರಿಗಳ ಗದ್ಯಾನುವಾದದೊಡನೆ, ಕನ್ನಡ ಸಾಹಿತ್ಯ ಪರಿಷತ್ತಿನಿಂದ ಪ್ರಕಾಶಿತವಾದ ಆದಿಪುರಾಣದಲ್ಲಿ (೧೯೮೦) 'ದಯೆಗೆಯ್ವನಕ್ಕೆ' ಎಂಬ ಶುದ್ಧರೂಪವಿರುವುದು ಮೆಚ್ಚಬೇಕಾದುದು.

## ೩. ಏನೆಂಬ ಪೆಂಪೊ

ಶಬ್ದಮಣಿದರ್ಪಣದ ಡಿ. ಎಲ್. ಎನ್. ಸಂಪಾದಿತ ಪ್ರತಿಯ ಸೂತ್ರ ೧೫೫ ಹೀಗಿದೆ—

ಯುಗಳಾರ್ಥದ ಬಹುವಚನ-
ಕ್ಕೊಗೆತಂದಾವಿಷ್ಟಲಿಂಗದೆಡೆಗೇಕತ್ವಂ
ನೆಗಬ್ಗುಂ ಕ್ರಿಯಾವಿಶೇಷಣ-
ಮಗಲದೆ ನಿಂದೆಡೆಗಮಱಿವರಿಂದೇಕತ್ವಂ

ಇದೇ ಸೂತ್ರ ಕಿಟ್ಟೆಲ್ ಆವೃತ್ತಿಯಲ್ಲಿ ೧೪೪ನೆಯದು, ಡಿ. ಕೆ. ಭೀಮಸೇನ ರಾವ್ ೧೫೯, ಲಿಂಗಣ್ಣಾರಾಧ್ಯ ೧೪೯, ಪದ್ಮನಾಭ ಶರ್ಮ ೧೪೫. ಬಹುವಚನಕ್ಕೆ ಎಲ್ಲೆಲ್ಲಿ ಏಕವಚನ ಪ್ರಯೋಗವಿದೆ–ಎಂಬುದನ್ನು ಈ ಸೂತ್ರದಲ್ಲಿ ಹೇಳಿದೆ. ಕ್ರಿಯಾ ವಿಶೇಷಣಕ್ಕೆ ಉದಾಹರಣವಾಗಿ 'ಏನೆಂಬ ಪೆಂಪೊ' ಎಂಬುದನ್ನು ಕೊಟ್ಟು "ಎಂತಹ ವರ್ಗಳೆಂಬ ಪೆರ್ಮೆಯೋ" ಎಂದು ಅರ್ಥವನ್ನು ಕೊಡಲಾಗಿದೆ. ಇಲ್ಲಿ ಏನ್ ಎಂಬುದು ಪ್ರಶ್ನಾರ್ಥಕ ಸರ್ವನಾಮಕಾರಕ. ಏನ್ ಎಂಬುದು ಏಕವಚನವೂ ಹೌದು. ಬಹುವಚನವೂ ಹೌದು. ಈ ಪ್ರಯೋಗದಲ್ಲಿ ಬಹುವಚನ. ಮೇಲೆ ಉದಾಹರಿಸಿದ ಶಬ್ದಮಣಿದರ್ಪಣದ ಪ್ರತಿಗಳಲ್ಲೆಲ್ಲಾ (ಲಿಂಗಣ್ಣಾರಾಧ್ಯನದು ಹೊರತಾಗಿ) 'ಏನೆಂಬೀ ಕ್ರಿಯೆಗೆ ಏನೆಂಬ ಕಾರಕಮೇಕವಿಶೇಷಣವಾಗಿ ಬಹುವಚನ ಮಾಯ್ತು' ಎಂದಿದೆ. ಇಲ್ಲಿ 'ಏನ್' ಎಂಬ ಕ್ರಿಯೆ ಎಲ್ಲಿದೆ? ಮಾತ್ರವಲ್ಲ 'ಏನ್' ಎಂಬುದು ಕ್ರಿಯೆಯಾಗುವುದು ಹೇಗೆ? ಇದನ್ನು ಮೇಲಿನ ಅಷ್ಟೂ ಮಂದಿ ಗ್ರಂಥ ಸಂಪಾದಕರೂ ಲಕ್ಷಿಸದೇ ಇದ್ದುದು ಆಶ್ಚರ್ಯ. ಈ ಸೂತ್ರವನ್ನು ಪಾಠಮಾಡುತ್ತಿರುವವರು ಪ್ರಸ್ತಾಪಿಸದೆ ಇದ್ದುದರ ಅಸಡ್ಡೆಯೂ ಆಶ್ಚರ್ಯಕರ. ಇಲ್ಲಿ ಒಂದು

ತಪ್ಪು ಬಂದಿದೆ. 'ಎಂಬ' ಎಂಬುದು-'ಎನ್+ವ' ಎಂದು, 'ಎನ್' ಎಂಬ ಧಾತುಗೆ ಭವಿಷ್ಯತ್ಕಾಲ ಕೃದಂತ ಪ್ರತ್ಯಯವಾಗಿರುವ 'ವ' ಎಂಬುದು ಸೇರಿ ಆಗಿದೆಯಷ್ಟೆ? ಆದುದರಿಂದ 'ಎನ್' ಎಂಬೀ ಕ್ರಿಯೆಗೆ (ಏನ್ ಎಂಬೀ ಕ್ರಿಯೆಗೆ ಎಂದಿರುವುದು ತಪ್ಪು) ಏನ್ ಎಂಬ ಕಾರಕಂ ಏಕವಿಶೇಷಣವಾಗಿ ಬಹುವಚನವಾಯ್ತು- ಎಂದು ಮುದ್ರಣವಾಗಬೇಕಿತ್ತು. ಇದಕ್ಕೆ ಲಕ್ಷ್ಯಕೊಡದವರೇ ಹೆಚ್ಚು. ಕನ್ನಡ ಸಾಹಿತ್ಯ ಪರಿಷತ್ತಿನಿಂದ ೧೯೨೦ರಲ್ಲಿ ಪ್ರಕಟವಾದ ಶಬ್ದಮಣಿದರ್ಪಣದಲ್ಲಿ (ಸೂತ್ರ ೧೪೪) 'ಎಂಬ ಎಂಬೀ ಕ್ರಿಯೆಗೆ' ಎಂದು ಮುದ್ರಿತವಾಗಿದೆ. ಇದು ಇತರ ಆವೃತ್ತಿಗಳ ಉಲ್ಲೇಖಕ್ಕಿಂತ ಲೇಸು. ಇತರ ಆವೃತ್ತಿಗಳ ಶಬ್ದಮಣಿದರ್ಪಣ ಗ್ರಂಥಗಳಲ್ಲಿ ಜಾಯಮಾನವಾಗಿ ಈ ತಪ್ಪೇ ಅಚ್ಚುಗೊಳ್ಳುತ್ತಿದೆ.

---



# ರನ್ನನ ಒಂದು ಪದ್ಯದ ಅರ್ಥಸಮಸ್ಯೆ

—ಡಾ|| ಎಂ. ಎಂ. ಕಲಬುರ್ಗಿ

ಗದಾಯುದ್ಧಕ್ಕೆ ಸಂಬಂಧಪಟ್ಟ ಒಂದು ಪದ್ಯದ ಪಾಠಸಮಸ್ಯೆಯನ್ನು ಕುರಿತು ನಾನು ಬರೆದ ಲೇಖನಕ್ಕೆ ಶ್ರೀ ಸು. ಕೃಷ್ಣ ಮತ್ತು ಡಾ|| ಎಂ. ಚಿದಾನಂದ ಮೂರ್ತಿ ಪ್ರತಿಕ್ರಿಯೆ ರೂಪದ ಲೇಖನ ಬರೆದಿದ್ದಾರೆ.* ಇಲ್ಲಿ ಡಾ|| ಮೂರ್ತಿ ಅವರು ಸಣ್ಣ ಪಾಠಸಮಸ್ಯೆಯನ್ನು ಬಿಡಿಸಿ ಸೃಷ್ಟಿಸಿರುವ ದೊಡ್ಡ ಅರ್ಥಸಮಸ್ಯೆಯನ್ನು ವಿವೇಚಿಸುತ್ತೇನೆ.

ಡಾ|| ಎಂ. ಎಂ. ಕಲಬುರ್ಗಿ ಅವರ ಪರಿಷ್ಕರಣ :

ಪಸಿವಿನೊಳನ್ನಮಂ ಸುಫಲದಲ್ಲಿ ಸುವರ್ಣಮನೀವ ಯುದ್ಧದೊಳ್  
ಕುಸಿಯದೆ ಸೂರೆಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವ ನಾ-  
ನಸಿಕೆಯ ನಾಲ್ವರುಂ ನಮಗೆ ವಂದ್ಯರವಂದಿರೊಳೀತನಲ್ತೆ ಸಾ-  
ಹಸಧನನೆಂದು ಕೆಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ ॥

[ಅರ್ಥ : ತನ್ನ ಹಸಿವೆಯಲ್ಲಿ(ಯೂ) ಅನ್ನವನ್ನು. ಅಭ್ಯುದಯದಲ್ಲಿ ಸುವರ್ಣವನ್ನು ದಾನಮಾಡುವ ಮತ್ತು ಯುದ್ಧದಲ್ಲಿ ಹಿಂಜರಿಯದೆ, ಸೂರೆಮಾಡದೆ ರಣಶುಚಿತ್ವವನ್ನು ಪಾಲಿಸುವ ಮನೋಧರ್ಮದ ಈ ನಾಲ್ಕು ಬಗೆಯ ಜನರು ನಮಗೆ ವಂದ್ಯರು. ಅಂಥವರಲ್ಲಿ ಸಾಹಸಧನನಾದ ಈತನೂ ಒಬ್ಬನಲ್ಲವೆ? ಎಂದು ಅಭಿಮನ್ಯುವಿಗೆ ದುರ್ಯೋಧನನು ಕೈಮುಗಿದನು.]

ಡಾ|| ಎಂ. ಚಿದಾನಂದಮೂರ್ತಿ ಅವರ ಪರಿಷ್ಕರಣ :

ಪಸವಿನೊಳನ್ನಮಂ ಸುಫಲದಲ್ಲಿ ಸುವರ್ಣಮನೀವ ಯುದ್ಧದೊಳ್  
ಕುಸಿಯದೆ ಸೂರೆಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವ ನಾ-  
ನಸಿಕೆಯ ನಾಲ್ವರುಂಟವರೆ ವಂದ್ಯರವಂದಿರೊಳೀತನಲ್ತೆ ಸಾ-  
ಹಸಧನನೆಂದು ಕೆಯ್ಮುಗಿದನಂದಭಿಮನ್ಯುಗೆ ಕೌರವೇಶ್ವರಂ ॥

[ಅರ್ಥ : ಕ್ಷಾಮದಲ್ಲಿ ಅನ್ನವನ್ನೂ ಸುಫಲದ ಕಾಲದಲ್ಲಿ ಚಿನ್ನವನ್ನೂ ದಾನ ಮಾಡುವ, ಯುದ್ಧದಲ್ಲಿ ಕುಸಿಯದೆ (ಇರುವ), (ಯುದ್ಧದಲ್ಲಿ) ಸೂರೆಮಾಡದೆ

* ಡಾ|| ಎಂ. ಎಂ. ಕಲಬುರ್ಗಿ : ಗದಾಯುದ್ಧದ ಒಂದು ಪದ್ಯ (ಕ.ಸಾ.ಪ. ೬೫–೧ ಮತ್ತು ೨).
ಶ್ರೀ ಸು. ಕೃಷ್ಣ : ಗದಾಯುದ್ಧದ ಒಂದು ಪದ್ಯ......ಒಂದು ಪ್ರತಿಕ್ರಿಯೆ (ಕ.ಸಾ.ಪ. ೬೬–೧)
ಡಾ|| ಎಂ. ಚಿದಾನಂದ ಮೂರ್ತಿ : ಆಸ್ವಾದ (ಪು. ೩೭೨. ಪ್ರೊ|| ಎಂ. ವಿ. ಸೀತಾರಾಮಯ್ಯ ಅಭಿನಂದನ ಗ್ರಂಥ)

(ಇರುವ) [ಅಥವಾ ಯುದ್ಧದಲ್ಲಿ ಕುಸಿಯದ, ಸೂರೆಗೊಳ್ಳದ]. ಯುದ್ಧಕ್ಕೆ ಸಂಬಂಧಿಸಿದಂತೆ ಶೌಚಗುಣವನ್ನು (ಇಂದ್ರಿಯ ಸಂಯಮವನ್ನು) ಪರಿಪಾಲಿಸುವ ಉದಾತ್ತತೆಯ ನಾಲ್ಕು ಜನರೂ ಮಂಪ್ಯರು. ಅವರಲ್ಲಿ ಈತನೇ ಅಲ್ಲವೆ-ಸಾಹಸದವನು ಎಂದು ಕೌರವೇಶ್ವರನಾದ ದುರ್ಯೋಧನನು ಅಂದು ಅಭಿಮನ್ಯುವಿಗೆ ಕೈಮುಗಿದನು.]

*　　　*　　　*

ಇಲ್ಲಿ ಡಾ॥ ಮೂರ್ತಿಯವರು ಸ್ವೀಕರಿಸಿದ 'ನಾಲ್ವರುಂಟವರೆ' ಎಂಬ ಪಾಠ ಗಮನಾರ್ಹವಾದುದೇನಲ್ಲ. ಅದರ ಚರ್ಚೆಯನ್ನು ಕೈಬಿಡಬಹುದು. ಆದರೆ ಬೇರೆ ಪಾಠಗಳೇ ಇಲ್ಲದ ಕಾರಣ ನಾನು ಅನಿವಾರ್ಯವಾಗಿ ಗ್ರಹಿಸಿದ್ದ ಏಕೈಕ ಪಾಠವಾದ 'ಪಸಿವು' ಅರ್ಥಕೊಡುತ್ತಿದ್ದರೂ, ಡಾ॥ ಮೂರ್ತಿ ಊಹಿಸಿದ 'ಪಸವು' ಇನ್ನೂ ಒಳ್ಳೆಯ ಪಾಠ, ಬಹುಶಃ ಮೂಲಪಾಠವೆಂದು ಒಪ್ಪಿಕೊಳ್ಳುತ್ತೇನೆ. ಆದರೆ ಈ ಪದ್ಯದಲ್ಲಿಯ 'ಶುಚಿತ್ವ' ಪದಪ್ರಯೋಗಕ್ಕೆ ಆಕರ್ಷಿತರಾಗಿ (ಹಳಗನ್ನಡ ಕಾವ್ಯಗಳನ್ನು ಸಂಸ್ಕೃತಿ ದೃಷ್ಟಿಯಿಂದ ಓದಿದವರನ್ನು ಆ ಪದ ಆಕರ್ಷಿಸುವುದು ಸಹಜ). ಅದಕ್ಕೂ ನಾಲ್ಕು ಕ್ರಿಯೆಗಳಲ್ಲಿ ಒಂದು ಸ್ವತಂತ್ರ ಸ್ಥಾನ ಕೊಡಲು ತವಕಿಸಿದ ಕಾರಣ ಡಾ॥ ಮೂರ್ತಿ ಅವರು ಈ ಪದ್ಯಕ್ಕೆ ಹೇಳಿದ ಅನ್ವಯ-ಅರ್ಥಗಳು ಅಸ್ತವ್ಯಸ್ತದಲ್ಲಿ ಪರ್ಯವಸಾನಗೊಂಡಿವೆ. ಡಾ॥ ಮೂರ್ತಿ ಹೇಳುವಂತೆ "ಕ್ಷಾಮಕಾಲದಲ್ಲಿ ಅನ್ನವನ್ನೂ ಸುಫಲದ ಕಾಲದಲ್ಲಿ ಚಿನ್ನವನ್ನೂ ದಾನಮಾಡುವ" ಎಂಬ ಅರ್ಥ ಹೊರಡಬೇಕಾದರೆ ಸಮುಚ್ಚಯ ವಿಧಿಯನ್ವಯ "ಪಸವಿನೊಳನ್ನಮುಮಂ ಸುಫಲದಲ್ಲಿ ಸುವರ್ಣಮುಮಂ ಈವ" ಎಂಬ ಪಾಠವಿರಬೇಕಾಗುತ್ತದೆ. ಇಲ್ಲಿ ಅಂಥ ಪಾಠವಿಲ್ಲ. ಆದುದರಿಂದ ಡಾ॥ ಮೂರ್ತಿ ಅವರಂತೆ ಇಲ್ಲಿಯ ಎರಡೂ ಕ್ರಿಯೆಗಳನ್ನು ಒಂದಾಗಿ ಭಾವಿಸದೆ ನಾನು ಹೇಳಿದಂತೆ ಎರಡಾಗಿ ಭಾವಿಸುವುದೇ ಯೋಗ್ಯವೆನಿಸುತ್ತದೆ.

ಈ ಪದ್ಯದಲ್ಲಿ ಒಟ್ಟು ನಾಲ್ಕು ಕ್ರಿಯೆಗಳಿವೆ. ಡಾ॥ ಮೂರ್ತಿ ಅವರು ಮೇಲೆ ಚರ್ಚಿಸಿದಂತೆ ಪ್ರಾರಂಭದ ಎರಡು ಕ್ರಿಯೆಗಳನ್ನು ಒಂದನ್ನಾಗಿ ಭಾವಿಸಿದುದರಿಂದ ಮುಂದೆ ಮೂರು ಕ್ರಿಯೆಗಳನ್ನು ಹುಡುಕುವುದು ಅವರಿಗೆ ಅನಿವಾರ್ಯವಾಗಿದೆ. ಮೇಲಾಗಿ 'ಶುಚಿ' ಎಂಬುದೂ ಅವರನ್ನು ಬಲವಾಗಿ ಆಕರ್ಷಿಸಿದೆ. ಆಗ "ಯುದ್ಧದೊಳ್ ಕುಸಿಯದೆ ಸೂಱೆಗೊಳ್ಳದೆ ರಣಕ್ಕೆ ಶುಚಿತ್ವಮನಪ್ಪುಕೆಯ್ವ" ಎಂಬ ಪಾಠದಿಂದ "ಯುದ್ಧದಲ್ಲಿ ಕುಸಿಯದೆ (ಇರುವ), (ಯುದ್ಧದಲ್ಲಿ) ಸೂರೆಮಾಡದೆ (ಇರುವ), ಯುದ್ಧಕ್ಕೆ ಸಂಬಂಧಿಸಿದಂತೆ ಶೌಚಗುಣವನ್ನು...ಪರಿಪಾಲಿಸುವ" ಎಂಬ ಮೂರು ಕ್ರಿಯೆಗಳ ಅರ್ಥ ಎಳೆದಿದ್ದಾರೆ. ತಮ್ಮ ನೇರಕ್ಕೇ ಅರ್ಥಮಾಡಲು ಹೋದ ಕಾರಣ ಮೂಲದಲ್ಲಿ ಕಾಣದ 'ಇರುವ' ಎಂಬ ಕ್ರಿಯಾಪದಗಳನ್ನು ಅವರು ಹೊಸದಾಗಿ ಸೇರಿಸಬೇಕಾಯಿತು. ಇಲ್ಲಿ ಅವರ ಅರ್ಥಾನುಸರಣೆ ವ್ಯಾಕರಣಕ್ಕೆ

ಮಾನ್ಯವೆನಿಸುವುದಿಲ್ಲ. ಒಂದು ವೇಳೆ ಮಾನ್ಯವೆನಿಸಬೇಕಿದ್ದರೆ "ಯುದ್ಧದೊಳ್ ಕುಸಿಯದ, ಸೂಟಿಗೊಳ್ಳದ, ರಣಕ್ಕೆ ಶುಚಿತ್ವಮನಪ್ಪುಕೆಯ್ವ" ಎಂಬ ಪಾಠ ಇರಬೇಕಾಗುತ್ತದೆ (ಹೀಗೆ ಇದ್ದರೂ ಮೊದಲಿನ ಎರಡು ನಿಷೇಧಾತ್ಮಕ ಕ್ರಿಯಾಪದ, ಕೊನೆಯದು ಸಾಮಾನ್ಯ ಕ್ರಿಯಾಪದ–ಎಂಬ ದೋಷ ಉಳಿಯುತ್ತಿತ್ತು : ಆ ಮಾತು ಬೇರೆ.). ತಮ್ಮ ಈ ಅರ್ಥಸಮಚ್ಚುವಿಕೆಯಲ್ಲಿ ಒಂದು ಬಗೆಯ ದೋಷ ಉಳಿದುಕೊಳ್ಳುತ್ತದೆ–ಎಂಬ ಅಂಶ ಡಾ॥ ಮೂರ್ತಿ ಅವರನ್ನು ಕಾಡಿದೆ. ಅಡಿಟಿಪ್ಪಣಿಯಲ್ಲಿ "ಈ ತಿದ್ದುಪಾಟವನ್ನು ಪ್ರೊ॥ ಎಂ. ವಿ. ಸೀತಾರಾಮಯ್ಯನವರೂ ಅನುಮೋದಿಸುತ್ತಾರೆ (ಅವರೊಡನೆ ಈ ಪದ್ಯದ ಬಗ್ಗೆ ಒಮ್ಮೆ ನಾನು ನಡೆಸಿದ ಚರ್ಚೆಯಲ್ಲಿ)" ಎಂದು ಪ್ರೊ॥ ಸೀತಾರಾಮಯ್ಯನವರ ನೆರವು ಪಡೆಯಲು ಹೋದುದೇ ಈ ಅನ್ವಯದ ಬಗೆಗಿರುವ ಅವರ ಅಧೀರ ಮನಸ್ಸನ್ನು ಸೂಚಿಸುತ್ತದೆ. ಆದುದರಿಂದ 'ಪಸಿವು' ಪದಕ್ಕೆ ಬದಲು ಸೂಚಿಸಿದ 'ಪಸವು' ಬಿಟ್ಟರೆ ಡಾ॥ ಮೂರ್ತಿ ಸೂಕ್ತ ಹೊಸದನ್ನೇನೂ ತಮ್ಮ ಲೇಖನದಲ್ಲಿ ಹೇಳಿಲ್ಲ: ತಪ್ಪು ಅನ್ವಯ ಮಾಡಿ ಇದೇ ಅರ್ಥವನ್ನೇ ತಪ್ಪು ದಾರಿಗೆ ಎಳೆದಿದ್ದಾರೆ. ಹೀಗಾಗಿ ಅವರ ಲೇಖನದ ಬಹುಭಾಗವನ್ನು ಕೈಬಿಟ್ಟು 'ಪಸವು' ಎಂಬ ಪಾಠವನ್ನು ಮಾತ್ರ ಒಪ್ಪಿಕೊಂಡು, ನನ್ನ ಮೊದಲಿನ ಅರ್ಥವನ್ನೇ ಮತ್ತೆ ಹೀಗೆ ಸ್ಪಷ್ಟಪಡಿಸುತ್ತೇನೆ.

"ದುರ್ಭಿಕ್ಷದಲ್ಲಿ ಅನ್ನವನ್ನು, ಸುಭಿಕ್ಷದಲ್ಲಿ ಸುವರ್ಣವನ್ನು **'ದಾನ'** ಮಾಡುವ, ಯುದ್ಧದಲ್ಲಿ ಹಿಂಜರಿಯದೆ, ಸೂರೆಮಾಡದೆ ರಣ**'ಶುಚಿ'**ತ್ವವನ್ನು ಪಾಲಿಸುವ ಮನೋಧರ್ಮದ ಈ ನಾಲ್ಕು ಬಗೆಯ ಜನರು ನಮಗೆ ವಂದ್ಯರು. ಅಂಥವರಲ್ಲಿ ಸಾಹಸಧನನಾದ ಈತನೂ ಒಬ್ಬನಲ್ಲವೆ? ಎಂದು ಅಭಿಮನ್ಯುವಿಗೆ ದುರ್ಯೋಧನನು ಕೈಮುಗಿದನು."

---



# ಗಮಕ ಸಮಾಸ—ಒಂದು ಸಮೀಕ್ಷೆ

—ವಿದ್ವಾನ್ ಎನ್. ರಂಗನಾಥಶರ್ಮಾ

ಗಮಕಸಮಾಸವೆಂಬ ಒಂದು ಸಮಾಸಭೇದವನ್ನು ಕೇಶಿರಾಜನು ಅಂಗೀಕರಿಸಿದ್ದಾನೆ. ಈ ವಿಷಯದಲ್ಲಿ ವಿದ್ವಾಂಸರು ಹಲವಾರು ಲೇಖನಗಳನ್ನು ಬರೆದಿದ್ದಾರೆ. ಅವರ ಪ್ರತಿಪಾದನೆ ಏನೆಂಬುದರ ಸ್ಮರಣೆ ನವಗಿಲ್ಲ.* ಆದರೆ ಇತ್ತೀಚೆಗೆ ಡಾ॥ ಎಸ್. ಎಸ್. ಬಿಳಿಗಿರಿಯವರು 'ಗಮಕಸಮಾಸವು ಸಮಾಸವೆ ?' ಎಂಬ ಪ್ರಬಂಧವನ್ನು ಬರೆದಿದ್ದಾರೆ. ಬೆಂಗಳೂರಿನ ಬಿ.ಎಂ.ಶ್ರೀ. ಪ್ರತಿಷ್ಠಾನವು 'ಮೂರು ದತ್ತಿ ಉಪನ್ಯಾಸಗಳು' ಎಂಬ ಹೊತ್ತಿಗೆಯಲ್ಲಿ ಈ ಪ್ರಬಂಧವನ್ನು ಪ್ರಕಟಿಸಿದೆ. ಅದನ್ನೋದಿದಮೇಲೆ ನನ್ನ ಕೆಲವು ವಿಚಾರಗಳನ್ನು ವಿದ್ವಾಂಸರ ಪರಿಶೀಲನೆಗಾಗಿ ಮುಂದಿಸಬೇಕೆಂದು ಮನಸ್ಸಾಯಿತು. ಆದರಿಂದ ಪ್ರಸ್ತುತವಾದದ್ದು ಈ ಲೇಖನ.

ಡಾ॥ ಬಿಳಿಗಿರಿಯವರು "'ಗಮಕ ಸಮಾಸ' ಎಂದು ಕರೆಸಿಕೊಳ್ಳುವ ರೂಪಗಳನ್ನು ವರ್ಣನಾತ್ಮಕ ಭಾಷಾವಿಜ್ಞಾನದ ದೃಷ್ಟಿಯಿಂದ ಪರಿಶೀಲಿಸಿ ಅವುಗಳು ಸಮಾಸಗಳೇ ಅಲ್ಲ ಎಂಬ ನಿಲುವಿಗೆ ನಾನು ಬಂದಿದ್ದೇನೆ" ಎಂದು ಹೇಳಿ, "ನಮ್ಮ ಪ್ರಾಚೀನ ವ್ಯಾಕರಣಗಳಿಗೂ ವರ್ಣನಾತ್ಮಕ ಭಾಷಾವಿಜ್ಞಾನಕ್ಕೂ ಯಾವ ಪೈಪೋಟಿಯೂ ಇಲ್ಲ" ಎಂದಿದ್ದಾರೆ. ಪೈಪೋಟಿಗೆ ನಿಲ್ಲದ ಭಾಷಾವಿಜ್ಞಾನವೇ ಕೇಶಿರಾಜನ ವ್ಯಾಕರಣಶಾಸ್ತ್ರದ ಸಿದ್ಧಾಂತವನ್ನು ಖಂಡಿಸುತ್ತದೆಯೆಂಬುದು ವಿಚಿತ್ರ. "ವ್ಯಾಕರಣಶಾಸ್ತ್ರ ಎಂಬುದು ವರ್ಣನಾತ್ಮಕ ಭಾಷಾವಿಜ್ಞಾನದ ಒಂದು ಶಾಖೆ" ಎಂದಿದ್ದಾರೆ ಡಾ॥ ಬಿಳಿಗಿರಿಯವರು. ಪ್ರಾಚೀನ ಕಾಲದಲ್ಲಿಯೇ ಹುಟ್ಟಿ ಬೆಳೆದು ಹೆಮ್ಮರವಾಗಿ ನಿಂತಿರುವ ವ್ಯಾಕರಣಶಾಸ್ತ್ರವು ಈಚೆಗೆ ಹುಟ್ಟಿ ಚಿಗುರುತ್ತಿರುವ ಭಾಷಾಶಾಸ್ತ್ರದ ಶಾಖೆಯೆನ್ನುವುದೂ ವಿಚಿತ್ರವೇ. ಪ್ರತಿಯಾಗಿ ಭಾಷಾಶಾಸ್ತ್ರವೇ ವ್ಯಾಕರಣಶಾಸ್ತ್ರದ ಅನುಬಂಧ ಅಥವಾ ಪರಿಶಿಷ್ಟ ಎನ್ನುವುದು ಸರಿ. ಇದು ಹೇಗಾದರೂ ಇರಲಿ. ನಮಗೆ ಪ್ರಕೃತವಾದದ್ದು ಗಮಕ ಸಮಾಸ. ವ್ಯಾಕರಣಶಾಸ್ತ್ರದ ದೃಷ್ಟಿಯಿಂದ ಇದು ಸಮಾಸವೆನಿಸಿಕೊಳ್ಳಲು ಅರ್ಹವೆ-ಅಲ್ಲವೆ ? ಎಂಬುದೀಗ ಪರಿಶೀಲನೀಯ.

ವೈಯಾಕರಣರು ಶಬ್ದಗಳನ್ನು ಹೊಸದಾಗಿ ಸೃಷ್ಟಿಸುವುದಿಲ್ಲ. ಕುಂಬಾರನು ಮಡಕೆಗಳನ್ನು ಮಾಡಿಕೊಡುವಂತೆ ಇವರು ಪದಗಳನ್ನು ಬೇಕಾದ ರೀತಿಯಲ್ಲಿ

---

* 'ಗಮಕ ಸಮಾಸ'ದ ವಿಷಯವಾಗಿ ವಿದ್ವಾಂಸರು ಪ್ರತಿಪಾದಿಸಿರುವ ವಾದ-ವಿವಾದಗಳ ಸಂಕ್ಷಿಪ್ತ ಸಮೀಕ್ಷೆಯನ್ನು ಪ್ರೊ॥ ಎಂ. ವಿ. ಸೀತಾರಾಮಯ್ಯನವರ 'ಪ್ರಾಚೀನ ಕನ್ನಡ ವ್ಯಾಕರಣಗಳು' (ಮೈಸೂರು ವಿಶ್ವವಿದ್ಯಾನಿಲಯದ ಪ್ರಕಟನೆ) ಗ್ರಂಥದಲ್ಲಿ ಕಾಣಬಹುದು. —ಸಂ.

ನಿರ್ಮಿಸುವುದಿಲ್ಲ. ಮತ್ತೇನೆಂದರೆ, ಲೋಕದಲ್ಲಿ ಮೊದಲೇ ಬಳಕೆಯಲ್ಲಿರುವ ಶಬ್ದಗಳ ಸ್ವರೂಪವನ್ನು–ಸಾಧುತ್ವವನ್ನು ತೋರಿಸಿಕೊಡುತ್ತಾರೆ. ಲೋಕದಲ್ಲಾದರೋ ಶಬ್ದ–ಅಪಶಬ್ದಗಳೆರಡರ ಬಳಕೆಯೂ ಉಂಟು. ವ್ಯಾಕರಣಶಾಸ್ತ್ರವು ಶಬ್ದಗಳನ್ನು ಎಂದರೆ ಸಾಧುಶಬ್ದಗಳನ್ನು ವಿವೇಚಿಸುತ್ತದೆ. ಸಾಧುಶಬ್ದವೆಂದರೆ ಶಿಷ್ಟಪ್ರಯುಕ್ತವಾದ ಶಬ್ದ. ಶಿಷ್ಟರೆಂದರೆ ಯಾರು ? ಸಂಸ್ಕೃತ ವ್ಯಾಕರಣದ ಶಿಷ್ಟಲಕ್ಷಣ ಜನಪದಭಾಷೆಗೆ ಸಲ್ಲದು. ಪ್ರಕೃತದಲ್ಲಿ ಕವಿಗಳನ್ನೂ ಶಾಸ್ತ್ರಕಾರರನ್ನೂ ಸಮಾಜದಲ್ಲಿ ಗಣ್ಯರೆನಿಸಿದ ವಿದ್ಯಾವಂತರನ್ನೂ ಶಿಷ್ಟರೆಂದಿಟ್ಟುಕೊಳ್ಳಬಹುದು.

ಶಬ್ದಗಳಾದರೋ ಅನಂತ. ಅವುಗಳನ್ನು ಎಣಿಸಿ ಪಟ್ಟಿಮಾಡಲು ಯಾರಿಂದಲೂ ಸಾಧ್ಯವಿಲ್ಲ. ಆದ್ದರಿಂದ ವ್ಯಾಕರಣಶಾಸ್ತ್ರವು ಒಂದು ಲಘುವಾದ ಉಪಾಯವನ್ನು ಹುಡುಕಿ ತೆಗೆದು ಲಕ್ಷಣಗಳ ಮೂಲಕ ಲಕ್ಷ್ಯಗಳನ್ನು ಸೆರೆಹಿಡಿಯುವ ತಂತ್ರವನ್ನು ರೂಪಿಸಿಕೊಂಡಿದೆ. ವ್ಯಾಕರಣಕಾರನು ವಿಶಾಲವಾದ ಶಬ್ದರಾಶಿಯನ್ನು ಬಲ್ಲವನಾಗಿರಲೇಬೇಕು. ಅವೆಲ್ಲವನ್ನೂ ಒಂದು ಕಟ್ಟುಪಾಡಿಗೆ ಅಳವಡಿಸಿ ಹೇಳಬಲ್ಲ ಮಹತ್ತರವಾದ ಕೌಶಲವೂ ಅವನಲ್ಲಿರಬೇಕು.

ಸಾಮಾನ್ಯಸೂತ್ರ (ಉತ್ಸರ್ಗ), ವಿಶೇಷಸೂತ್ರ (ಅಪವಾದ) ಗಳ ಮೂಲಕ ವಿಧಿನಿಷೇಧಗಳಿಂದ ವ್ಯಾಕರಣ ರಚನೆ. ಸಂಜ್ಞೆ, ಪರಿಭಾಷೆ, ನಿಯಮ, ಅಧಿಕಾರಗಳು ವಿಭಿನ್ನ ತಂತ್ರಗಳು. ಇವುಗಳಲ್ಲಿ ಸಂಜ್ಞೆಯೇ ಮುಖ್ಯಪಾತ್ರವನ್ನು ನಿರ್ವಹಿಸುತ್ತದೆ. ಧಾತು, ಪ್ರಾತಿಪದಿಕ, ಪ್ರತ್ಯಯ, ಕೃತ್, ತದ್ಧಿತ, ಸಮಾಸ–ಮೊದಲಾದ ಸಂಜ್ಞೆಗಳು ಸಂಸ್ಕೃತ ವ್ಯಾಕರಣದಿಂದ ನೇರವಾಗಿ ತೆಗೆದುಕೊಂಡವೆಂಬುದು ಸ್ಪಷ್ಟವಾಗಿದೆ. ಬಹುಶಃ ಸಂಸ್ಕೃತ ವ್ಯಾಕರಣವೇ ಕನ್ನಡದಲ್ಲಿ ವ್ಯಾಕರಣರಚನೆಗೆ ಉದ್ಬೋಧಕವಾಗಿದೆ. ಸಮಾಸಭೇದಗಳಾದ ಅವ್ಯಯೀಭಾವ, ತತ್ಪುರುಷ, ದ್ವಂದ್ವ, ಬಹುವ್ರೀಹಿಗಳು ಸಂಸ್ಕೃತ ಪದಗಳೇ. ದ್ವಿಗು ಸಮಾಸ ಕರ್ಮಧಾರಯದ ಭೇದ. ಕರ್ಮಧಾರಯ ತತ್ಪುರುಷದ ಒಳಭೇದ. ಕೇಶಿರಾಜನು ಅವ್ಯಯೀಭಾವವೆಂದು ಹೆಸರಿಸುವ ಅಂಗಯ್, ಅಂಗಾಲ್, ಮುಂಗಾಲ್ ಮೊದಲಾದವು ಅವ್ಯಯಗಳಲ್ಲ. ಇವುಗಳಿಗೆ ಅವ್ಯಯೀಭಾವವೆಂಬ ಹೆಸರು ಅಷ್ಟು ಸಮಂಜಸವಲ್ಲವಾದರೂ ಅವನ ಪ್ರಕಾರ ಅವ್ಯಯಗಳೊಡನೆ ಸಮಾಸವಾದ್ದರಿಂದ ಈ ಹೆಸರನ್ನಿಟ್ಟಿದ್ದಾನೆಂದು ಹೇಳಬೇಕಾಗಿದೆ. ತತ್ಪುರುಷಭೇದವಾದ ಅಂಶಿ ಸಮಾಸವೇ ಇದು ಎನ್ನುವುದು ಯುಕ್ತ. 'ಗಮಕ ಸಮಾಸ' ಎಂಬ ಸಂಜ್ಞೆ ಸಂಸ್ಕೃತ ವ್ಯಾಕರಣದಲ್ಲಿಲ್ಲ ಎಂಬುದೊಂದು ವಿಶೇಷ. 'ಗಮಕತ್ವಾತ್ ಸಮಾಸಃ' ಎಂದು ಕೆಲವೆಡೆ ಹೇಳುತ್ತಾರಾದರೂ ಕೇಶಿರಾಜನು ಹೇಳುವ ಗಮಕಸಮಾಸಕ್ಕೂ ಅದಕ್ಕೂ ಯಾವ ಸಂಬಂಧವೂ ಇಲ್ಲ. ಸಮಾಸ ಮುಂತಾದ ಸಾಮಾನ್ಯ ಸಂಜ್ಞೆಗಳೂ ಬಹುವ್ರೀಹಿ ಮುಂತಾದ ವಿಶೇಷ ಸಂಜ್ಞೆಗಳೂ ಇಷ್ಟರೂಪಸಿದ್ಧಿಗಾಗಿಯೇ ಹೊರತು ಆಡಂಬರಕ್ಕಾಗಿ ಅಲ್ಲ ಎಂಬುದನ್ನು ನೆನಪಿನಲ್ಲಿಡಬೇಕು.

ಕೇಶಿರಾಜನು ಶಬ್ದಮಣಿದರ್ಪಣದಲ್ಲಿ ಹೇಳಿರುವ ಗಮಕ ಸಮಾಸದ ಲಕ್ಷಣ ಹೀಗಿದೆ —

ಜನಿಯಿಸುಗುಂ ಸಂಖ್ಯಾಸ-
ರ್ವನಾಮ ಗುಣವಚನ ಕೃತ್‌ಪ್ರಪೂರ್ವಂ ಗಮಕಂ ।
ತನಗತ್ವಂ ಪೆಱಗಿತ್ವಂ
ತನಗಾಪವನಿಲ್ಲ ಕರ್ಮಧಾರಯಮದುವುಂ ॥ ಸೂ. ೧೭೯ ॥

ಈ ಸೂತ್ರದ ವೃತ್ತಿ ಹೀಗಿದೆ—"ಪರಪದದೊಳ್ ಕಾರಕಮುಂ ಪೂರ್ವಪದ ದೊಳ್ ಸಂಖ್ಯಾಸರ್ವನಾಮಗುಣವಚನಕೃತ್‌ಪದಂಗಳಾವುವಿರ್ದೊಡಂ ಗಮಕಸಮಾಸ ಮಕ್ಕುಂ. ಇದಱೊಳ್ ಅರಿಸಮಾಸದೋಷಮಿಲ್ಲ. ಅದು ಕರ್ಮಧಾರಯದ ಭೇದಂ. ಎತ್ತಾನುಂ ತತ್ಪುರುಷಮಪ್ಪುದು."

ಇದಕ್ಕೆ ಕೊಟ್ಟಿರುವ ಉದಾಹರಣೆಗಳನ್ನು ಪರಿಶೀಲಿಸುವುದಕ್ಕೆ ಮೊದಲು, ಈ ಸೂತ್ರವೃತ್ತಿಗಳ ಅಭಿಪ್ರಾಯವೇನೆಂದು ಗಟ್ಟಿಮಾಡಿಕೊಳ್ಳಬೇಕಾಗಿದೆ. ಸಂಖ್ಯೆ, ಸರ್ವನಾಮ. ಗುಣವಚನ, ಕೃದಂತ–ಇವುಗಳಲ್ಲಿ ಯಾವುದಾದರೂ ಪೂರ್ವಪದ ವಾಗಿರುವ ಸಮಾಸಕ್ಕೆ ಗಮಕ ಸಮಾಸವೆಂದು ಸಂಜ್ಞೆ—ಎಂಬುದಾಗಿ ಸೂತ್ರದ ಪೂರ್ವಾರ್ಧದ ಅರ್ಥವಾಗುತ್ತದೆ. ಸಂಖ್ಯಾದಿ ಶಬ್ದಗಳು ಯಾವ ವಿಭಕ್ತಿಯಲ್ಲಿರ ಬೇಕೆಂದಾಗಲಿ ಸಮಾಸವು ಯಾವ ಅರ್ಥದಲ್ಲಿ ಬರುತ್ತದೆಯೆಂದಾಗಲಿ ಹೇಳಿಲ್ಲವಾದ್ದ ರಿಂದ ಸಮಾಸಸ್ವರೂಪದ ನಿರ್ಧಾರಣೆಯೇ ಆಗುವುದಿಲ್ಲ. ಆದರೆ 'ಕರ್ಮಧಾರಯ-ಮದುವುಂ' ಎಂದು ಸೂತ್ರದಲ್ಲಿಯೂ 'ಎತ್ತಾನುಂ ತತ್ಪುರುಷಮಪ್ಪುದು' ಎಂದು ವೃತ್ತಿಯಲ್ಲಿಯೂ ಹೇಳಿರುವುದರಿಂದ ಸಮಾಸದ ಸ್ವರೂಪವನ್ನು ಊಹಿಸಿಕೊಳ್ಳ ಬಹುದು. ಸಂಖ್ಯಾಪೂರ್ವಪದವಾದ ಕರ್ಮಧಾರಯಕ್ಕೆ ದ್ವಿಗು ಸಂಜ್ಞೆಯಿರುವುದ ರಿಂದ ದ್ವಿಗುವನ್ನೂ ಇದರಲ್ಲಿ ಸಮಾವೇಶಮಾಡಿಕೊಳ್ಳುವುದು ಸಮಂಜಸ.

ಇದು ಸಂಜ್ಞಾಸೂತ್ರವೊ ಅಥವಾ ವಿಧಿಸೂತ್ರವೊ ? ವಿಧಿಸೂತ್ರವಾಗಬೇಕಾ ದರೆ ಅಜ್ಞಾತಜ್ಞಾಪಕವಾಗಬೇಕು, ಎಂದರೆ, ಸೂತ್ರಾಂತರದಿಂದ ಅಪ್ರಾಪ್ತವಾದದ್ದನ್ನು ವಿಧಿಸಿದರೆ ವಿಧಿಯಾಗುತ್ತದೆ. ತತ್ಪುರುಷ. ಕರ್ಮಧಾರಯಗಳೆರಡನ್ನೂ ಬೇರೆ ಸೂತ್ರಗಳಿಂದ ವಿಧಿಸಿರುವ ಪ್ರಯುಕ್ತ ಆ ಸಮಾಸಗಳು ಪ್ರಾಪ್ತವಾಗಿಯೇ ಇವೆ. ಈ ಸೂತ್ರವಿಲ್ಲದಿದ್ದರೂ ಸಂಖ್ಯಾದಿ ಪೂರ್ವಪದಗಳಿಗಿರುವ ತತ್ಪುರುಷವೂ ಕರ್ಮಧಾರಯವೂ ಸಿದ್ಧವಾಗುತ್ತವೆ. ಗಮಕಸಮಾಸಕ್ಕೆ ಕೊಟ್ಟಿರುವ ಉದಾಹರಣೆ ಗಳೆಲ್ಲವೂ ಸಮಾಸವಿಧಾಯಕಗಳಾದ ಸೂತ್ರಾಂತರಗಳಿಂದಲೇ ಸಿದ್ಧವಾಗುತ್ತವೆ. ಆದ್ದರಿಂದ ಇದು ಸಂಜ್ಞಾಸೂತ್ರವೇ ಹೊರತು ವಿಧಿಸೂತ್ರವಲ್ಲ. ತಾತ್ಪರ್ಯ ವೇನಾಯಿತೆಂದರೆ–ಸಂಖ್ಯಾ ಸರ್ವನಾಮಾದಿಗಳಲ್ಲಿ ಯಾವುದಾದರೊಂದು ಪೂರ್ವಪದ

ವಾಗಿರುವ ತತ್ಪುರುಷ, ಕರ್ಮಧಾರಯ, ದ್ವಿಗು ಸಮಾಸಗಳಿಗೆ 'ಗಮಕಸಮಾಸ' ಎಂಬ ಇನ್ನೊಂದು ಹೆಸರೂ ಉಂಟು.

ಈ ಸೂತ್ರದ ಅಡಿಯಲ್ಲಿ ಗ್ರಂಥಕಾರನು ವಿಶಿಷ್ಟವಾದ ಕೆಲವು ಉದಾಹರಣೆಗಳನ್ನು ಕೊಟ್ಟಿದ್ದಾನೆ. ಅವಲ್ಲದೆ ತತ್ಸದೃಶವಾದ ಕೆಲವೇ ಉದಾಹರಣೆಗಳು ಮಾತ್ರ ಗಮಕವೆಂದು ಕೆಲವರು ಭಾವಿಸಿದಂತೆ ಕಾಣುತ್ತದೆ. ಸೂತ್ರದ ಪ್ರಕಾರ ತೂಗುಂಜೊಡರ್, ಬೆಳ್ನೊರೆ, ನಾಲ್ವೆರಲ್, ನೂರ್ಮಡಿ, ಕೆಂಜಡೆ, ಕಟ್ಬಾಳ್—ಮೊದಲಾದವೂ ಗಮಕ ಸಮಾಸಗಳೇ ಎಂದು ಹೇಳಬೇಕಾಗುತ್ತದೆ. ಆದರೆ ಸೂತ್ರದಲ್ಲಿ 'ತನಗತ್ವಂ ಪೆಜಗಿತ್ವಂ' ಎಂದು ಹೇಳಿದೆ. ಹಾಗೆಂದರೇನು? ವೃತ್ತಿಯಲ್ಲಿ 'ಗುಣವಚನದೊಳಂತರಾಳಕ್ಕೆ ಒಂದಕಾರಂ, ಪಿಂತಣ ಮೆಯ್ಯೊಳ್ ಇಕಾರಮುಕ್ಕುಂ' ಎಂದು ಅರ್ಥವನ್ನು ಬರೆದಿದೆ. ಉದಾಹರಣೆಯಾಗಿ ಅಸಿಯ ನಡು, ಪಸಿಯ ಬಣ್ಣಂ, ಬಿಳಿಯ ಕರ್ಬುರ—ಮುಂತಾದವನ್ನು ತೋರಿಸಲಾಗಿದೆ.

ಪ್ರಕೃತ, 'ತನಗತ್ವಂ' ಎಂಬಲ್ಲಿ ತನಗೆ ಎಂದರೆ ಗುಣವಚನವೆಂಬ ಅರ್ಥ ದೊರೆಯುವುದು ಹೇಗೆ? ತನಗೆ ಎಂಬ ಸರ್ವನಾಮದಿಂದ ಪ್ರಾಕೃತವಾದ ಗಮಕ ಸಮಾಸವನ್ನೋ ಅಥವಾ ಪೂರ್ವಪದಗಳಾಗುವ ಸಂಖ್ಯಾಸರ್ವನಾಮಾದಿಗಳನ್ನೋ ಗ್ರಹಿಸಬಹುದೇ ಹೊರತು ಬರಿಯ ಗುಣವಚನವನ್ನು ಗ್ರಹಿಸುವುದು ಶಕ್ಯವಲ್ಲ. ವೃತ್ತಿಯಲ್ಲಿ ಹಾಗೆ ಬರೆದಿರುವುದರಿಂದ 'ಆಗಲಿ' ಎನ್ನಬೇಕಾಗಿದೆ. ಅತ್ವ, ಇತ್ವಗಳ ವಿಧಿಯಂತೂ ತುಂಬ ವಿಚಿತ್ರವಾದದ್ದು.

ಅಸಿದು + ನಡು = ಅಸಿಯ ನಡು. ಪಸಿದು + ಬಣ್ಣಂ = ಪಸಿಯ ಬಣ್ಣಂ.

ಬಿಳಿದು + ಕರ್ಬುರ = ಬಿಳಿಯ ಕರ್ಬುರ. ಇಲ್ಲಿ 'ದು' ಶಬ್ದಕ್ಕೆ ಅತ್ವ ಬಂದಿದೆ. ಈ ಅಕಾರ ಗುಣವಚನದ ಅಂತ್ಯದಲ್ಲಿರುವ 'ದು' ಎಂಬುದಕ್ಕೆ ಬಂದಿದೆ. ವೃತ್ತಿಕಾರನು ಅಂತರಾಳಕ್ಕೆ ಎಂದು ಬರೆದಿದ್ದಾನೆ! 'ಗುಣವಚನಸಹಿತವಾದ ಗಮಕದ ಅಂತರಾಳಕ್ಕೆ' ಎಂದರೆ ಪೂರ್ವಪದದ ಅಂತ್ಯ 'ದು' ಶಬ್ದಕ್ಕೆ ಎಂದು ಅರ್ಥಮಾಡಿಕೊಂಡು ಸಮಾಧಾನಪಟ್ಟುಕೊಳ್ಳಬೇಕಾಗಿದೆ. ಇನ್ನು ಇತ್ವ ವಿಧಿ ವ್ಯರ್ಥವೇ. ಉದಾಹೃತ ಗುಣವಚನದಲ್ಲಿ ಇಕಾರ ಇದ್ದೇ ಇದೆ. ಕೇಶಿರಾಜನ ಶಾಸ್ತ್ರದ 'ಧಾಟಿ'ಯನ್ನರಿಯುವುದು ತುಂಬ ಕಷ್ಟ. ಇಕಾರ—ಅಕಾರಗಳ ನಡುವೆ ಯಕಾರಾಗಮ ಬಂದಿದೆ. ಗುಣವಚನಪೂರ್ವಸಮಾಸದಲ್ಲಿ 'ತನಗತ್ವಂ ಪೆಜಗಿತ್ವಂ' ಎಂಬುದಕ್ಕೆ ಯಾವುದು ಲಕ್ಷ್ಯವೋ ('ಅಸಿಯ ನಡು, ಪಸಿಯ ಬಣ್ಣಂ' ಮುಂತಾದದ್ದು) ಅದು ಗಮಕಸಮಾಸವೆಂದೂ ಕೆಂಜಡೆ, ಕಟ್ಬಾಳ್ ಮೊದಲಾದದ್ದು ಗುಣವಚನಪೂರ್ವವಾದರೂ ಗಮಕಸಮಾಸವಲ್ಲವೆಂದೂ ಕೇಶಿರಾಜನ ಆಶಯವಿದ್ದರೂ ಇರಬಹುದು.

ಹೀಗೆ ಒಪ್ಪುವುದಾದರೆ ಎಳೆಯ ಬಳ್ಳಿ, ಹಳೆಯ ಕನ್ನಡ—ಇವು ಗಮಕಸಮಾಸಗಳಾಗುವುದಿಲ್ಲ. ಅತ್ವ ಇಲ್ಲಿ ಬಂದಿದ್ದರೂ ಇತ್ವ ಬಂದಿಲ್ಲ: 'ಪಸಿಯ ಬಣ್ಣಂ'

ಎಂಬಲ್ಲಿರುವಂತೆ ಇಕಾರವೂ ಇಲ್ಲ. ಮೊದಲೇ ಹೇಳಿದಂತೆ ಈ ಸೂತ್ರವು ಅಪೂರ್ವ ವಿಧಿಯಲ್ಲ. ಇದನ್ನು ಹೇಳದಿದ್ದರೂ ಸಮಾಸ ಬರಲಡ್ಡಿಯಿಲ್ಲ. ಆದರೆ ಈ ಸೂತ್ರದಿಂದ ಹೊಸದಾಗಿ ಗೊತ್ತಾಗತಕ್ಕ ಅಂಶಗಳು ಮೂರು—

೧. ಕರ್ಮಧಾರಯದಲ್ಲಿ ಗುಣವಚನದ 'ದು' ಶಬ್ದಕ್ಕೆ ಅಕಾರಾದೇಶ ಬರುತ್ತದೆ.

೨. ಇದಕ್ಕೆ ಅರಿಸಮಾಸ ದೋಷವಿಲ್ಲ (ಇದಕರಿಪದನಿಲ್ಲ).

೩. ಈ ಸಮಾಸಕ್ಕೆ ಗಮಕ ಎಂದು ಸಂಜ್ಞೆ.

ಶಬ್ದಾನುಶಾಸನವನ್ನು ರಚಿಸಿದ ಭಟ್ಟಾಕಳಂಕನು ಕೇಶಿರಾಜನ ತರುವಾಯದವನು. ಈತನು ಶಬ್ದಮಣಿದರ್ಪಣವನ್ನು ನೋಡಿಯೇ ಇದ್ದಾನೆ. ಇವನು ದೊಡ್ಡ ವಿದ್ವಾಂಸ. ವಿಧಿನಿಯಮಗಳಿಗೆ ಯಾವ ದೋಷವೂ ಬರದಂತೆ ಶಾಸ್ತ್ರಶುದ್ಧವಾಗಿ ಬರೆಯುತ್ತಾನೆ. ಪ್ರಕೃತ ಭಟ್ಟಾಕಳಂಕನ ಈ ಸೂತ್ರ ಗಮನಾರ್ಹವಾದದ್ದು—

ಕೃತ್‌ಸಂಖ್ಯಾದ್ವಾದಿಗುಣೋಕ್ತಿಃ ಸಂಸ್ಕೃತೇನ ಚ ॥ ಸೂ ೨೯೪ ॥

"ಕೃದಂತ, ಸಂಖ್ಯಾವಾಚಕ, ಅದ್ವಾದಿ ಗಣಪಠಿತವಾದ ಶಬ್ದ, ಗುಣವಾಚಕ—ಇವು ಪ್ರಕೃತಿಯಾಗಿರುವ ಸುಬಂತಶಬ್ದವು ಕನ್ನಡಪದದೊಡನೆಯೂ ಸಂಸ್ಕೃತಪದದೊಡನೆಯೂ ಸಮಾಸ ಹೊಂದುತ್ತದೆ."

ಸುಬಂತವೆಂದರೆ ನಾಮಪದ. ಸಮಾಸಪ್ರಕರಣದ ಆದಿಯಲ್ಲೇ ಈ ಸೂತ್ರ ಇದೆ. ಭಟ್ಟಾಕಳಂಕನ ಪ್ರಕಾರ ಇದು ಅಧಿಕಾರಸೂತ್ರ, ವಿಧಿಸೂತ್ರವಲ್ಲ. ಇದರಿಂದ ಯಾವ ಸಮಾಸವನ್ನೂ ವಿಧಿಸುವುದಿಲ್ಲ. ಮುಂದಿನ ಎಲ್ಲ ಸಮಾಸವಿಧಿಸೂತ್ರಗಳಲ್ಲಿಯೂ ಇದಕ್ಕೆ ಅನುವೃತ್ತಿಯುಂಟು. ಮುಂದಿನ ಎಲ್ಲ ವಿಧಿಗಳಲ್ಲಿಯೂ ಕೃದಂತಸಂಖ್ಯಾದಿಗಳು ಸಂಸ್ಕೃತಶಬ್ದದೊಡನೆಯೂ ಸಹ ಸಮಾಸ ಹೊಂದುತ್ತವೆ ಎಂದರ್ಥ. ಇವುಗಳೊಡನೆ ಸಮಾಸವಾದಾಗ ಅರಿಸಮಾಸದೋಷವಿಲ್ಲವೆಂದು ಮುಖ್ಯ ತಾತ್ಪರ್ಯ. ಈ ಸೂತ್ರದಲ್ಲಿ ಅದ್ವಾದಿಯೆಂದರೆ ಅದು, ಇದು, ಉದು, ಯಾವುದು—ಮುಂತಾದ ಸರ್ವನಾಮ. ಈಗ—

ಜನಿಯಿಸುಗುಂ ಸಂಖ್ಯಾಸ-
ರ್ವನಾಮ ಗುಣವಚನ ಕೃತ್‌ಪ್ರಪೂರ್ವಂ ಗಮಕಂ ॥

ಎಂಬ ಕೇಶಿರಾಜನ ಸೂತ್ರಕ್ಕೂ ಮೇಲ್ಕಂಡ ಭಟ್ಟಾಕಳಂಕನ ಸೂತ್ರಕ್ಕೂ ಅರ್ಥದಲ್ಲಿ ಯಾವ ವ್ಯತ್ಯಾಸವಿದೆ? ಇಲ್ಲಿ ಅರಿಪದದೋಷವಿಲ್ಲವೆಂಬುದನ್ನು ಇರ್ವರೂ ಒಪ್ಪಿದ್ದಾರೆ. ಕೇಶಿರಾಜನು ತತ್ಪುರುಷ, ಕರ್ಮಧಾರಯಗಳಿಗೆ ಮಾತ್ರ ಈ ನಿಯಮವನ್ನು ಅನ್ವಯಿಸಿದರೆ, ಭಟ್ಟಾಕಳಂಕನು ಎಲ್ಲ ಸಮಾಸಗಳಿಗೂ ಸಾಮಾನ್ಯವಾಗಿ

ಈ ನಿಯಮವನ್ನು ಒಪ್ಪಿದ್ದಾನೆ. ಇದರಿಂದ ನಾಲ್ಕು ಭುಜಗಳು ಯಾರಿಗೋ ಅವನು ನಾಲ್ಭುಜನ್, ಪಿರಿಯ ಗುಣನ್ – ಮುಂತಾದ ಬಹುವ್ರೀಹಿಯೂ ಭಟ್ಟಾಕಳಂಕನ ಮತದಲ್ಲಿ ಸಿದ್ಧಿಸುತ್ತದೆ. ಹಿಂದೆ ಹೇಳಿದಂತೆ ಗಮಕ ಸಮಾಸವು ನೂತನ ಸಮಾಸವಲ್ಲವೆಂಬುದು ಇದರಿಂದ ನಿಶ್ಚಿತವಾಯಿತು. ನಾಲ್ಭುಜನ್–ಮೊದಲಾದ ಬಹುವ್ರೀಹಿಯನ್ನು ಕೇಶಿರಾಜನು ಒಪ್ಪುವುದಾದರೆ, 'ಕರ್ಮಧಾರಯಮದುವುಂ' ಎಂದು ಅವನು ಹೇಳಿದ್ದು ಬಹುವ್ರೀಹಿಗೂ ಉಪಲಕ್ಷಣ ಎಂದು ತಿಳಿಯಬೇಕಾಗುತ್ತದೆ. ಪರಿಸ್ಥಿತಿ ಹೀಗಿರುವಾಗ 'ಗಮಕ ಸಮಾಸವು ಸಮಾಸವೆ?' ಎಂಬ ಪ್ರಶ್ನೆಯೇ ಅಸಂಗತ: 'ಸಂಖ್ಯಾಸರ್ವನಾಮ ಗುಣವಚನ ಕೃದಂತಪೂರ್ವಕವಾದ ಸಮಾಸವು ಸಮಾಸವೆ?' ಎಂಬಷ್ಟೇ ಪ್ರಶ್ನೆಯಾಗಿ ಉಳಿಯುತ್ತದೆ.

ಇಷ್ಟರೂಪದ ಸಿದ್ಧಿಯಂತೂ ವ್ಯಾಕರಣದ ಪ್ರಯೋಜನವಾಯಿತಷ್ಟೆ. ಅದರ ಜೊತೆಗೆ ಅನಿಷ್ಟರೂಪದ ನಿವೃತ್ತಿಯೂ ಪ್ರಯೋಜನವೆಂದು ನೆನಪಿನಲ್ಲಿಡಬೇಕು. ಇಷ್ಟೇ ಅಲ್ಲ. ಇನ್ನೊಂದು ಮುಖ್ಯವಾದ ಅಂಶವಿದೆ. ವ್ಯಾಕರಣದಲ್ಲಿ ಸಮಾಸವನ್ನು ಸಮಾಸವೃತ್ತಿಯೆನ್ನುತ್ತಾರೆ. 'ಪರಾರ್ಥಾಭಿಧಾನಂ ವೃತ್ತಿಃ'. ಸಮಾಸಾಪಯುವ ಶಬ್ದಗಳ ಅರ್ಥವೇ ಅಲ್ಲದೆ ಇನ್ನೊಂದು ಹೊಸ ಅರ್ಥವೂ ಅದರಲ್ಲಿ ಸೇರಿರುತ್ತದೆ. ಈ ಅರ್ಥವಿಶೇಷವನ್ನು ವಿಗ್ರಹವಾಕ್ಯದಿಂದ ತೋರಿಸಲಾಗುತ್ತದೆ. ಅವಯವ ಶಬ್ದಗಳಿಗಿಂತ ಹೆಚ್ಚಿನ ಅರ್ಥ ಎಲ್ಲಿ ತೋರುತ್ತದೆಯೋ ಅದು ಸಮಾಸದಿಂದಲೇ ತೋರುತ್ತದೆಯೆಂದು ವೈಯಾಕರಣರ ಸಿದ್ಧಾಂತ.

ಕೇಶಿರಾಜನು ಗಮಕ ಸಮಾಸಕ್ಕೆ ಕೊಟ್ಟ ಉದಾಹರಣೆಗಳನ್ನು ಈಗ ಪರೀಕ್ಷಿಸಬಹುದು. (ಸೂತ್ರ ೧೬೮.)

೧. ಪ್ರಯೋಗಂ–ಸಂಖ್ಯೆಗೆ

> ಇರ್ಪತ್ತೈದು, ನೂಱುಪತ್ತು ಮೂವತ್ತಾರು
> 'ಮೂವತ್ತಾರುಂ ಗುಣಂಗಳ್ ತಮಗಮರ್ದಿರೆ'

ಇಲ್ಲಿ ವಿಗ್ರಹವಾಕ್ಯ ಹೇಗೆ? ಇದು ಯಾವ ಸಮಾಸ? ಕೇಶಿರಾಜನ ಪ್ರಕಾರ ಇದು ಕರ್ಮಧಾರಯವಾಗಬೇಕು. ಇರ್ಪತ್ತು ಸಹಿತವಾದ ಅಥವಾ ಇಪ್ಪತ್ತು ಅಧಿಕವಾದ ಐದು ಇರ್ಪತ್ತೈದು–ಎಂದು ವಿಗ್ರಹ ಹೇಳಬೇಕಾಗುತ್ತದೆ. ಮಧ್ಯಮಪದ ಲೋಪ ಕರ್ಮಧಾರಯ. 'ಸಹಿತ' ಅಥವಾ 'ಅಧಿಕ' ಶಬ್ದ ಲುಪ್ತವಾಗಿದೆ. ಹಾಗಲ್ಲದೆ ಇರ್ಪತ್ತು ಮೇಣ್ ಐದು–ಎಂದು ದ್ವಂದ್ವಸಮಾಸವನ್ನೂ ಮಾಡಬಹುದು. ಸಂಸ್ಕೃತದಲ್ಲಿಯೂ 'ದ್ವಾದಶ, ಪಂಚವಿಂಶತಿ' ಮೊದಲಾದವು ಮೇಲ್ಕಂಡಂತೆ ಕರ್ಮಧಾರಯವೆಂದೂ ದ್ವಂದ್ವವೆಂದೂ ಎರಡು ಪಕ್ಷಗಳಿವೆ. 'ಪಂಚಾಧಿಕಾ ವಿಂಶತಿಃ ಪಂಚವಿಂಶತಿಃ' ಎಂದು ಹೇಳಿ 'ಅಧಿಕ' ಶಬ್ದವನ್ನು ಲೋಪಮಾಡುವುದೂ ಉಂಟು. ಭಟ್ಟಾಕಳಂಕನ ಮತದಲ್ಲಿ ಇರ್ಪತ್ತೈದು ಮೊದಲಾದವು ದ್ವಂದ್ವಸಮಾಸಗಳು.

ಇವು ಸಮಾಸಗಳೆನ್ನುವುದಕ್ಕೆ ಗಮಕಗಳೇನು ?

(ಅ) ನಡುವೆ ಇನ್ನೊಂದು ಶಬ್ದವನ್ನು ತುರುಕಲಾಗುವುದಿಲ್ಲ.

ಇರ್ಪತ್ತು ನನಗೆ ಐದು ಹಣ್ಣುಗಳು ಬೇಕು ಎನ್ನಲಾಗದು.

(ಆ) ಪೂರ್ವಪದದಮೇಲೆ ವಿಭಕ್ತಿಪ್ರತ್ಯಯ ಬರುವುದಿಲ್ಲ.

ಇಪ್ಪತ್ತೈದನ್ನು ಕೊಡುತ್ತಾನೆ ಎನ್ನುತ್ತೇವೆಯೇ ಹೊರತು ಇಪ್ಪತ್ತನ್ನೂ ಐದನ್ನೂ ಕೊಡುತ್ತಾನೆ ಎನ್ನುವುದಿಲ್ಲ. ಹೂ ಹಣ್ಣುಗಳನ್ನು ಕೊಡುತ್ತಾನೆ ಎಂಬಲ್ಲಿ ಸಮಾಸವಾಗದಿದ್ದಾಗ ಹೂವನ್ನೂ ಹಣ್ಣನ್ನೂ ಕೊಡುತ್ತಾನೆ ಎಂದಾಗುತ್ತದೆಯಲ್ಲವೆ ?

(ಇ) ಇಲ್ಲಿ ಇಪ್ಪತ್ತು ಐದು – ಇವುಗಳ ಸಂಕಲನದಿಂದಾದ ಸಮುದಾಯಸಂಖ್ಯೆ ತೋರುತ್ತದೆಯೇ ಹೊರತು ಬಿಡಿಬಿಡಿಯಾಗಿ ಎರಡು ಸಂಖ್ಯೆಗಳು ತೋರುವುದಿಲ್ಲ. ಸಂಕಲನರೂಪವಾದ ಹೊಸ ಅರ್ಥ ಸಮಾಸದಿಂದ ಬಂದದ್ದು. ಸಮಾಸವಾಗದಿದ್ದರೆ ಈ ಸಮುದಾಯಾರ್ಥವು ಪ್ರತೀತವಾಗುವುದು ಹೇಗೆ ? ಆದ್ದರಿಂದಲೇ 'ಪರಾರ್ಥಾಭಿಧಾನಂ ವೃತ್ತಿಃ' ಎಂದು ಹೇಳಿದ್ದು.

(ಈ) 'ಮೂವತ್ತಾರುಂ ಗುಣಂಗಳ್' ಎಂಬಲ್ಲಿ ಸಮುಚ್ಚಯಬೋಧಕವಾದ 'ಉಂ' ಸಮುದಾಯಸಂಖ್ಯೆಯಲ್ಲಿ ಅನ್ವಿತ. ಸಮಾಸವಲ್ಲದಿದ್ದರೆ 'ಮೂವತ್ತುಂ ಆರುಂ' ಎಂದು ಎರಡು ಕಡೆ ಇದರ ಪ್ರಯೋಗವಾಗಬೇಕಾಗುತ್ತದೆ, ರಾಮನುಂ, ಕೃಷ್ಣನುಂ ಎಂಬಂತೆ.

ಕೇಶಿರಾಜನು ಕೊಟ್ಟ ಉದಾಹರಣೆಗಳು ದಿಕ್‌ಪ್ರದರ್ಶನ ಮಾತ್ರ. ಪನ್ನೊಂದು, ಪದಿನೆಂಟು, ಎಂಬಯ್ ಸಾಸಿರಂ – ಮೊದಲಾದವೆಲ್ಲ ಉದಾಹರಣೆಗಳೇ. ಇವು ಸಮಾಸವಲ್ಲದಿದ್ದರೆ ಪೂರ್ವಪದಕ್ಕೆ ಪನ್, ಪದಿ, ಎಂಬಯ್ ಮುಂತಾದ ಆದೇಶಗಳು ಬರುವುದೆಂತು ? ಪದಿನಾಲ್ಕು, ಇರ್ಪತ್ತು, ಈರಯ್ದು–ಮುಂತಾದವೂ ಈ ಸೂತ್ರಕ್ಕೆ ಉದಾಹರಣೆಗಳೇ. ಡಾ॥ ಬಿಳಿಗಿರಿಯವರು ನಿಷ್ಕಾರಣವಾಗಿ ಎತ್ತೆತ್ತಲೋ ಸುತ್ತಾಡಿದ್ದಾರೆ. ಅಲ್ಲದೆ ಕೇಶಿರಾಜನು ಉದಾಹರಿಸಿದ ಇರ್ಪತ್ತೈದು, ನೂಱುಪತ್ತು, ಮೂವತ್ತಾರು–ಈ ಶಬ್ದಗಳು ಸಮಾಸವಲ್ಲವೆಂಬುದಕ್ಕೆ ಯಾವ ಉಪಪತ್ತಿಯನ್ನೂ ತಿಳಿಸಿಲ್ಲ. ಏಕಪಕ್ಷೀಯವಾಗಿ ಇವು ಸಮಾಸವಲ್ಲವೆಂದು ತೀರ್ಪನ್ನಿತ್ತು ಹತ್ತುಸಾವಿರ, ಎಂಟುನೂರು – ಇವು ಸಮಾಸಗಳೇ ಎಂದು ಒಪ್ಪಿಕೊಂಡಿರುವುದು ತುಂಬ ವಿಚಿತ್ರವಾಗಿದೆ.

ಇರ್ಪತ್ತು ಎಂಬಲ್ಲಿ ಯಾವ ಸಮಾಸ ? ಎರಡು ಸಲ ಪತ್ತು ಇರ್ಪತ್ತು, ಎಂದು ವಿಗ್ರಹ. ಭಟ್ಟಾಕಳಂಕನ ಪ್ರಕಾರ ಇದು ಬಹುವ್ರೀಹಿ. ಸಂಸ್ಕೃತ ವ್ಯಾಕರಣಕ್ಕೆ ಇದು ಸಂಮತ. ಕೇಶಿರಾಜನು ಏನನ್ನೂ ಹೇಳಿಲ್ಲ. ಅವನ ಲಕ್ಷಣ ಅಪೂರ್ಣ.

ಸಂಖ್ಯಾಪೂರ್ವವಾದ್ದರಿಂದ ಗಮಕ ಸಮಾಸ ಎನ್ನಬೇಕು. ಆದರೆ ಕರ್ಮಧಾರಯದ ಲಕ್ಷಣ ಇದರಲ್ಲಿಲ್ಲ. 'ಏಕಾಶ್ರಯ'ವಾದರೆ ಎಂದರೆ ಅಭೇದಾನ್ವಯವಿದ್ದರೆ ಕರ್ಮಧಾರಯ. ಇರ್ಪತ್ತು ಎಂಬಲ್ಲಿ ಅಭೇದಾನ್ವಯವಿಲ್ಲ. ಅದಿರಲಿ. 'ಏತ್ತಾನುಂ ತತ್ಪುರುಷಮಪ್ಪುದು' ಎಂದು ಗ್ರಂಥಕಾರನು ಹೇಳುತ್ತಾನಲ್ಲ. ಅದಕ್ಕೆ ಉದಾಹರಣೆ ಯಾವುದು? ವಿದ್ವಾಂಸರು ಇದನ್ನು ಪರೀಕ್ಷಿಸಿಲ್ಲವೆಂದು ಹೇಳಬೇಕಾಗಿದೆ. ಕರ್ಮಧಾರಯವಲ್ಲದ ತತ್ಪುರುಷ ಗಮಕ ಸಮಾಸದಲ್ಲಿ ಯಾವುದು? ಸರ್ವನಾಮ, ಗುಣವಚನ, ಕೃದಂತಪೂರ್ವವಾದಾಗ ಕರ್ಮಧಾರಯವೇ ಆಗಿರುತ್ತದೆ. ಆದ್ದರಿಂದ ಸಂಖ್ಯಾಪೂರ್ವವಾದ ಇರ್ಪತ್ತೈದು, ಮೂವತ್ತಾರು-ಮೊದಲಾದವುಗಳಲ್ಲೇ ಇದನ್ನು ಕಂಡುಕೊಳ್ಳಬೇಕಾಗುತ್ತದೆ. ಇರ್ಪತ್ತು ಅಧಿಕವಾದ ಐದು ಇರ್ಪತ್ತೈದು ಎಂದು ವಿಗ್ರಹವನ್ನು ಹೇಳಬೇಕಾದ್ದರಿಂದ, ಇಲ್ಲಿ ಅಭೇದಾನ್ವಯವಿಲ್ಲವೆಂದೂ ಇದೇ ತತ್ಪುರುಷವೆಂದೂ ಕೇಶಿರಾಜನ ಅಭಿಪ್ರಾಯವಿರಬೇಕು.

3. ಸರ್ವನಾಮಕ್ಕೆ—ಆವ ಮಾತು, ಆವ ಕಾರ್ಯಂ. ಆವ ನಾಯಕಂ, ಆವ ಕಾಂತೆ.

ಡಾ॥ ಬಿಳಿಗಿರಿಯವರು ಈ ಉದಾಹರಣೆಗಳನ್ನು ಪರಿಶೀಲಿಸಿಲ್ಲ. ತಮ್ಮ ಅನುಕೂಲಕ್ಕಾಗಿ ಕೈಬಿಟ್ಟಿರಬಹುದು. ಸಮಾಸದಲ್ಲಿ 'ಆವುದು' ಶಬ್ದದ 'ದು'ವಿಗೆ ಅಕಾರಾದೇಶ ಬಂದು ಹಿಂದಿನ ಉಕಾರಲೋಪವಾಗಿ 'ಆವ' ಆಗಿದೆಯೆಂದು ವ್ಯಾಕರಣದ ಪ್ರಕ್ರಿಯೆ. 'ದು' ಶಬ್ದಕ್ಕೆ ಲೋಪವೆನ್ನುವುದು ಇನ್ನೊಂದು ಪ್ರಕಾರ. ಲಿಂಗವಚನಗಳ ಭೇದವಿಲ್ಲದೆ ಈ ರೂಪವಾಗುತ್ತದೆ. ಉದಾ: ಆವ ಕಾರ್ಯಂ-ಆವ ಕಾರ್ಯಂಗಳ್. ಆವ ಪೆಣ್-ಆವ ಪೆಣ್ಗಳ್. ಆವ ಪುರುಷನ್-ಆವ ಪುರುಷರ್. ಸಮಾಸವಲ್ಲದಿದ್ದರೆ ಈ ರೂಪಗಳನ್ನು ಸಾಧಿಸುವುದು ಹೇಗೆ? 'ಆವುದು' ಶಬ್ದಕ್ಕೆ ಆದೇಶ ಬಂದಿಲ್ಲವೆಂದೂ 'ಆವ' ಎಂಬ ಸ್ವತಂತ್ರಶಬ್ದವಿದೆಯೆಂದೂ ಹೇಳುತ್ತೀರೇನು? ಹಾಗಿದ್ದರೆ 'ಮರಂ' 'ಮರಂಗಳ್' ಎಂಬಂತೆ ನಪುಂಸಕದಲ್ಲಿ 'ಆವಂ' 'ಆವಂಗಳ್' ಎಂದೂ ಉಳಿದ ಬಹುವಚನದಲ್ಲಿ 'ಆವರ್' ಎಂದೂ ವಿಭಿನ್ನರೂಪಗಳು ಈ ಶಬ್ದಕ್ಕೆ ಪ್ರಾಪ್ತವಾಗುತ್ತವಲ್ಲ, ಇವನ್ನು ತಪ್ಪಿಸುವುದು ಹೇಗೆ? ಅಷ್ಟೇ ಅಲ್ಲ. 'ಆವುದು' ಶಬ್ದಕ್ಕೇ ಸಮಾಸವಾದಾಗ 'ಆವುದು ಪುರುಷನ್' ಇತ್ಯಾದಿ ರೂಪಗಳು ಪ್ರಾಪ್ತವಾಗುತ್ತವೆ. ಸಮಾಸವನ್ನೊಪ್ಪದ ವಿದ್ವಾಂಸರು ಈ ಶಂಕೆಗಳಿಗೆ ಕೃಪೆಯಿಟ್ಟು ಸಮಾಧಾನ ಹೇಳಿದ್ದರೆ, ನಮ್ಮ ಜ್ಞಾನದ ಮಟ್ಟವನ್ನು ಹೆಚ್ಚಿಸಿಕೊಳ್ಳಬಹುದಾಗಿತ್ತು. ಅನಿಷ್ಟರೂಪದ ವ್ಯಾವೃತ್ತಿಯೂ ಸಹ 'ಸಮಾಸ' ಸಂಜ್ಞೆಯ ಪ್ರಯೋಜನ.

ಅದುವಿದುವುದುಗಾಯೀಯೂ
ಪೊದವುಗುಮಾದೇಶಮಾಗಿ ಗಮಕದೊಳಾಯೆಂ-
ಬುದು ಪೂರ್ವಪರಾಮರ್ಶಿಗ-
ಮೊದವುಗುಮಾರೂಢಿಗಂ ಕವೀಶ್ವರಮತದಿಂ ॥ ಸೂ. ೧೪೯ ॥

ಉದಾ—ಅದು ಮನೆ=ಆ ಮನೆ, ಈ ಮರ, ಊಪೆಣ್.

ಡಾ॥ ಜಿಳಿಗಿರಿಯವರು ಇವು ಸಮಾಸಗಳಲ್ಲವೆನ್ನುತ್ತಾರೆ. ಅವರು

ಆ ಕರಿಯ ನೆಯ್ದಿಲ್
ಆ ನೆರೆದ ಗುರುಜನಂಗಳ್
ಈ ಅಸಿಯ ನೂಲ್

ಇತ್ಯಾದಿ ಪ್ರಯೋಗಗಳನ್ನುದಾಹರಿಸಿ, ಇಲ್ಲಿ ಸಮಾಸವನ್ನೊಪ್ಪಿದರೆ ಕರಿಯನೆಯ್ದಿಲ್ ಎಂಬುದು ಗಮಕಸಮಾಸವಾಗಿ ಅನಂತರ ಆ ಕರಿಯನೆಯ್ದಿಲ್ ಎಂಬುದೂ ಗಮಕ ಸಮಾಸವೆನ್ನಬೇಕಾಗುತ್ತದೆ ಎಂದಿದ್ದಾರೆ. ಇವುಗಳನ್ನೂ ಸಮಾಸವೆಂದರೆ ಸೂತ್ರ ಕ್ಕಾಗಿ ಆತ್ಮವನ್ನು ಮಾರಿಕೊಂಡಂತಾಗುತ್ತದೆಯೆಂದೂ ಇದು ಹಾಸ್ಯಾಸ್ಪದವೆಂದೂ ಹೇಳುತ್ತಾರೆ (ಪು. 86, 87).

ಅಲಂಕಾರಿಕವಾದ ಈ ಹೇಳಿಕೆ ಕೇಳಲು ಚೆನ್ನಾಗಿದೆ. ಇಷ್ಟು ಹೇಳಿ ಕೈತೊಳೆದು ಕೊಳ್ಳಲಾಗುವುದಿಲ್ಲ. ಮೇಲ್ಕಂಡ ಪ್ರಯೋಗಗಳನ್ನು ನೀವು ಹೇಗೆ ಸಾಧಿಸುತ್ತೀರಿ? ಸಮಾಸವಾಗದಿದ್ದರೂ ಆ, ಈ – ಆದೇಶಗಳು ಬರುತ್ತವೆಂದು ಹೇಳುತ್ತೀರೊ? ಹಾಗಿದ್ದರೆ, ಕರಿಯ ನೆಯ್ದಿಲ್ ಆ, ನೆರೆದ ಗುರುಜನಂಗಳ್ ಈ – ಮುಂತಾದ ಪ್ರಯೋಗಗಳೇಕೆ ಬರುವುದಿಲ್ಲ? ವಿಶೇಷ್ಯವು ಮುಂದೆ ಇದ್ದಾಗ ಮಾತ್ರ ಹಿಂದೆ ಇರುವ 'ಅದು ಇದು'ಗಳಿಗೆ ಆ, ಈಗಳು ಆದೇಶವಾಗಿ ಬರುತ್ತವೆಯೆಂದು ಸೂತ್ರವನ್ನು ರಚಿಸುತ್ತೀರೊ? ಹಾಗೆ ಹೊಸನಿಯಮವನ್ನು ರಚಿಸುವುದಕ್ಕಿಂತ ಸಿದ್ಧವೇ ಆಗಿರುವ ಸಮಾಸವನ್ನೊಪ್ಪಿದರೆ ಬಾಧಕವೇನು? ಹಾಸ್ಯಕ್ಕೆ ವಿಷಯವೇನಿದೆ? ನಗು ಬರಲು ಕಾರಣವೇನು? ಹಾಗಲ್ಲದೆ ಆ, ಈ – ಎಂಬ ಸ್ವತಂತ್ರವಾದ ಪ್ರತ್ಯೇಕ ಶಬ್ದಗಳಿವೆ ಯೆಂದು ಒಪ್ಪುವುದಾದರೆ ಸಮಾಸವಾಗದ ಇನ್ನೊಂದು ಪ್ರಯೋಗವನ್ನು ತೋರಿಸ ಬೇಕಾಗುತ್ತದೆ. ರಾಮನು ಯಾರು?–ಎಂಬ ಪ್ರಶ್ನೆಗೆ 'ಅವನು' ಎಂದು ಉತ್ತರಿಸು ವಂತೆ. 'ಆ' ಎಂದು ಉತ್ತರಿಸುವುದುಂಟೊ? ಮತ್ತು ಈ ಪಕ್ಷದಲ್ಲಿ 'ಅದು' ಶಬ್ದಕ್ಕೆ 'ಪುರುಷ' ಶಬ್ದದೊಡನೆ ಸಮಾಸವಾದಾಗ 'ಅದು ಪುರುಷ' ಎಂಬ ರೂಪ ಪ್ರಾಪ್ತ ವಾಗುತ್ತದೆ. ಈ ಆವೃತ್ತಿಯನ್ನು ತಪ್ಪಿಸಲು ಸಾಧ್ಯವಿಲ್ಲ.

ಕೇಶಿರಾಜನ ಮೇಲ್ಕಂಡ ಸೂತ್ರದ ದ್ವಿತೀಯಾರ್ಧವನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ ಇನ್ನೊಂದು ಅಭಿಪ್ರಾಯ ದೊರೆಯುತ್ತದೆಯೆಂದು ನಮ್ಮ ಎಣಿಕೆ. ಆ, ಈ–ಎಂಬ ಆದೇಶಗಳೇ ಅಲ್ಲದೆ ಸ್ವತಂತ್ರವಾದ ಆ, ಈ ಶಬ್ದಗಳೂ ಇವೆಯೆಂದೂ ಸ್ಮರಣೆ, ಪ್ರಸಿದ್ಧಿ – ಇವೆರಡು ಅರ್ಥಗಳಲ್ಲಿ ಮಾತ್ರ ಇವಕ್ಕೆ ಪ್ರಯೋಗವೆಂದೂ ಆತನು ಹೇಳುವಂತೆ ಕಾಣುತ್ತದೆ. 'ಆ ನಿನ್ನ ಮೊಗ' ಮುಂತಾದವು ಪ್ರಾಮಾಣಿಕ ಪ್ರಯೋಗವಾದರೆ, ಸ್ಮರಣೆ ಅಥವಾ ಪ್ರಸಿದ್ಧಿಯ ಅರ್ಥದಲ್ಲಿ ಬಂದಿದೆಯೆಂದು ಹೇಳ

ಬೇಕಾಗುತ್ತದೆ. ಸ್ವತಂತ್ರ ಶಬ್ದಗಳೆಂದು ಒಪ್ಪಿದರೂ ಅದು ಇವುಗಳಿಗೆ ಸಮಾಸವನ್ನೂ ಆದೇಶವನ್ನೂ ಹೇಳುವುದು ಅನಿವಾರ್ಯ. ಹಾಗೆಯೇ ಎಲ್ಲದು ಧನಂ= ಎಲ್ಲ ಧನಂ. ಎಲ್ಲಾ ಧನಂ ಎಂಬ ರೂಪಗಳನ್ನು ಸಾಧಿಸುವುದಕ್ಕೆ ಇದು ಸಮಾಸವೆಂದು ಒಪ್ಪಬೇಕಾಗುತ್ತದೆ.

೩. ಕೃತ್ತಿಂಗೆ—

ಪಾಡುವ ತುಂಬಿ. ಕೋಡುವ ಪುಟ್ಟಿಲ್. ಆಡಿದ ಪೊಲನ್. ಕಂಡ ವಿಚಾರಂ.

ಇವು ಸಮಾಸಗಳೆಂದು ಹೇಳುವ ಕೇಶಿರಾಜನ ಅಭಿಪ್ರಾಯ ಹೀಗೆ-ಪಾಡುವ. ಕೋಡುವ. ಆಡಿದ. ಕಂಡ - ಮೊದಲಾದವು ಕೃದಂತಗಳು. ಇವುಗಳಿಗೆ ವಿಭಕ್ತಿ ಪ್ರತ್ಯಯಗಳು ಸೇರಿ ಪಾಡುವನ್. ಪಾಡುವನು. ಪಾಡುವಂಗೆ. ಪಾಡುವರ- ಮುಂತಾದ ನಾಮಪದಗಳಾಗುತ್ತವೆ. ಅರ್ಥಾನುಸಾರವಾಗಿ ವಿಭಕ್ತಿಪ್ರತ್ಯಯಗಳು ಹತ್ತಲೇಬೇಕು. ಮೇಲ್ಕಂಡ ಶಬ್ದಗಳು ಸಮಾಸವಲ್ಲವಾದರೆ, ಪಾಡುವ ತುಂಬಿಗೆ. ಪಾಡುವ ತುಂಬಿಗಳು. ಪಾಡುವ ತುಂಬಿಗಳ - ಮೊದಲಾದ ಸ್ಥಳದಲ್ಲಿ ಕೃದಂತದ ಮುಂದೆ ವಿಭಕ್ತಿಪ್ರತ್ಯಯವೇಕೆ ಬಂದಿಲ್ಲ-ಎಂಬ ಪ್ರಶ್ನೆ ಹುಟ್ಟುತ್ತದೆ.

ವಿದಿತ ವಿಶೇಷಣಪದಮವು
ಮೊದಲ ವಿಭಕ್ತಿಗಳನಾಂತು ವಾಕ್ಯದ ಮೊದಲೊಳ್ ।
ಪದವೆತ್ತುವಗ್ರಕಾರಕ
ಪದದ ವಿಭಕ್ತಿಯನೆ ತಳೆವುವಪ್ಪುಯಮುಬಿದೊಳ್ ॥ ಸೂ. ೧೪೦ ॥

ಪ್ರಯೋಗಂ-ವೀರನುದಾರಂ ಶುಚಿಗಂ-
ಭೀರಂ ನಯಶಾಲಿ ಕೈದುವೊತ್ತರದೇವಂ- ।
ಗಾರೆಜಗನ್ನೃಪತುಂಗಂಗೆ...॥

ವಿಶೇಷ್ಯದ ಮೇಲೆ ಯಾವ ವಿಭಕ್ತಿಯಿದ್ದರೂ ವಿಶೇಷಣದ ಮೇಲೆ ಪ್ರಥಮಾ ವಿಭಕ್ತಿ ಬರಬಹುದೆಂದು ವಿಶೇಷವಿಧಿ ಇದು. ಇದು ವಿಕಲ್ಪವಾದ್ದರಿಂದ-

'ವೀರಂಗೆ ಉದಾರಂಗೆ ಶುಚಿಗಂಭೀರಂಗೆ ನೃಪತುಂಗಂಗೆ' ಎಂದು ವಿಶೇಷ್ಯದ ಚತುರ್ಥಿಯೂ ಬರಬಹುದು. ಅಂತೂ ವಿಶೇಷಣದ ಮೇಲೆ ವಿಭಕ್ತಿ ಬರಲೇಬೇಕು. ಆದ್ದರಿಂದ ಪಾಡುವ ತುಂಬಿ. ಪಾಡುವಂಗನೆಗೆ. ಪಾಡುವ ಪುರುಷರ-ಮೊದಲಾದ ಸ್ಥಳದಲ್ಲಿ ವಿಶೇಷಣದ ವಿಭಕ್ತಿಗೆ ಲೋಪವನ್ನು ಸಾಧಿಸಲು ಸಮಾಸವನ್ನೊಪ್ಪಬೇಕು- ಎಂದು.

ವಿಚಾರ—ಪಾಡುವ. ತೀಡುವ. ಬೇಡುವ. ಕಾಣುವ ಮೊದಲಾದವು ವರ್ತಮಾನ ಕ್ರಿಯಾಬೋಧಕಗಳು. ಪಾಡಿದ, ತೀಡಿದ, ಬೇಡಿದ, ಕಂಡ

ಮೊದಲಾದವು ಭೂತ ಕ್ರಿಯಾಬೋಧಕಗಳು. ಇವು ಯಾವಾಗಲೂ ವಿಶೇಷಣಗಳೇ. ಈ ಕೃಂತಗಳಿಗೆ ವಿಶೇಷ್ಯದೊಡನೆ ಸಮಾಸ ಮಾಡಿದಾಗ ನಡುವೆ ಇನ್ನೊಂದು ಶಬ್ದದ ಪ್ರವೇಶಕ್ಕೆ ಅವಕಾಶವಿರಬಾರದು. ಆದರೆ ಈ ಪ್ರಯೋಗಗಳನ್ನು ನೋಡಿ—

೧. ತೀವಿದ ಕಮ್ಮನಪ್ಪ ತುಪ್ಪದ ಕೊಡದೊಳ್

೨. ಮೆಟ್ಟಿದ ಕಾಲೊಳ್ ಪಾವುಗೆ
ಕಟ್ಟಿದ ಕೊರಳಲ್ಲಿ ಮುತ್ತಿನೆಕ್ಕಾವಳಿ ತ- ।
ನ್ನಿಟ್ಟ ನೊಸಲಲ್ಲಿ ಕತ್ತುರಿ
ಬೊಟ್ಟು ಕರಂ ಸೊಬಗುವಡೆದುದಾ ನೃಪಸುತನಾ ॥

೩. ಮಾಡುವ ನಿನ್ನೊಳಿಗಮಂ
ಪಾಡುವ ನಿನ್ನೊಳ್ಗುಣಂಗಳಂ ಸಂತಸದಿಂ- ।
ದಾಡುವ ನಿನ್ನೊಡನಮರರ
ಗಾಡಿಯೆ ಪೇಳ್ದಪುದು ನಿನ್ನ ಪೆಂಪಂ ಜಿನಪಾ ॥

ಇಂತಹ ನೂರಾರು ಪ್ರಯೋಗಗಳನ್ನು ತೋರಿಸಬಹುದು. ಇಲ್ಲಿ ವಿಶೇಷಣ ವಿಶೇಷ್ಯಗಳ ನಡುವೆ ಇತರ ಶಬ್ದಗಳು ಸೇರಿವೆ. ಆದ್ದರಿಂದ ಇವನ್ನು ಸಮಾಸ ವೆನ್ನುವುದು ಹೇಗೆ? ಅಲ್ಲದೆ ಈ ಕೃದಂತಗಳು ವಿಶೇಷ್ಯದ ಹಿಂದೆ ಇರಬೇಕೆಂಬ ನಿಯಮವನ್ನೂ ಮಾಡಲಾಗುವುದಿಲ್ಲ. ವಿಶೇಷ್ಯದ ಮುಂದೆಯೂ ಇರಬಹುದು. ಜಗನ್ನಾಥವಿಜಯದ ಈ ಪದ್ಯವನ್ನು ನೋಡಿ—

ಶ್ರೀರಾಮಾಸಟಿ ಕೌಸ್ತುಭದ್ಯುತಿಕಿರತ್ ಪುಷ್ಪಾಂಜಲಿಕ್ಷೇಪವ-
ಕ್ಷೋರಂಗಸ್ಥಿತಿಯಾದ ಪಾದನಖರೋಚಿರ್ಗಂಗೆ ಪೃಥ್ವೀಶಕೋ ।
ಟೀರವ್ಯಾಪ್ತಿಗೆ ಸಂದ ಚಕ್ರರವಿ ದೈತ್ಯಧ್ವಾಂತಮಂ ಗೆಲ್ದ ಭೂ
ಭಾರಚ್ಛೇದವಿನೋದಿ ಕೃಷ್ಣನೆಮಗೀಗಾನಂದಸಂದೋಹಮಂ ॥

ಈ ಪದ್ಯದಲ್ಲಿ 'ಆದ ಶ್ರೀರಾಮಾಸಟಿ, ಸಂದ ಪಾದನಖರೋಚಿರ್ಗಂಗೆ, ಗೆಲ್ದ ಚಕ್ರರವಿ' ಎಂಬುದಾಗಿ ಅನ್ವಯವಷ್ಟೆ. ಪದ್ಯದಲ್ಲಿ ವಿಶೇಷ್ಯಗಳು ಮೊದಲಿದ್ದು ವಿಶೇಷಣಗಳು ಅನಂತರ ಬಂದಿವೆ. ಹೀಗಿರುವಾಗ ಸಮಾಸವಾಗಿದೆಯೆಂಬ ಶಂಕೆಗೆ ಸಹ ಅವಕಾಶವಿಲ್ಲ. ಇವುಗಳ ಉಪಪತ್ತಿ ಹೇಗೆ? ಈ ವಿಷಯದಲ್ಲಿ ಕೇಶಿರಾಜನು ಮೌನವನ್ನವಲಂಬಿಸಿದ್ದಾನೆ. ಭಟ್ಟಾಕಳಂಕನು ಶಬ್ದಾನುಶಾಸನದಲ್ಲಿ 'ಅಗ್‌ಬಹುಲಂ' (ಸೂ. ೩೪೫) ಎಂದು ಸೂತ್ರಿಸಿ ಬಹುಲಗ್ರಹಣದಿಂದ ಇವೆಲ್ಲವನ್ನೂ ಸೂಚಿಸಿದ್ದಾನೆ. ವಿಧಿಸೂತ್ರದ ಪ್ರಾಪ್ತಿ, ನಿವೃತ್ತಿ, ವಿಕಲ್ಪ ಅಥವಾ ಇನ್ನಾವುದೋ ವಿಧಿಸೂತ್ರದ

ಪ್ರಾಪ್ತಿ–ಇವುಗಳನ್ನು ವೈಯಾಕರಣರು 'ಬಹುಲ' ಶಬ್ದದಿಂದ ಸಾಧಿಸುತ್ತಾರೆ. 'ಕ್ವಚಿತ್ ಪ್ರವೃತ್ತಿಃ ಕ್ವಚಿದಪ್ರವೃತ್ತಿಃ ಕ್ವಚಿದ್ವಿಭಾಷಾ ಕ್ವಚಿದನ್ಯದೇವ' ಎಂದು ಪ್ರಾಚೀನರ ವಚನವಿದೆ. ಕುತೂಹಲವುಳ್ಳವರು ಶಬ್ದಾನುಶಾಸನದ ಸೂ. ೩೪೫ ಮತ್ತು ೯೬೭ರ ಸಂಸ್ಕೃತ ವ್ಯಾಖ್ಯಾನವನ್ನೂ ಶ್ರೀ ಕುಂಡಲಗಿರ್ಯಾಚಾರ್ಯರ ಕನ್ನಡ ವ್ಯಾಖ್ಯಾನವನ್ನೂ (ಶಿ. ಶಿ. ಬಸವನಾಳರಿಂದ ಸಂಪಾದಿತ) ನೋಡಬಹುದು. ತಾತ್ಪರ್ಯವಿಷ್ಟು—

೧. ಯಾವುದೇ ಒಂದು ಪದವು ಪರವಾದಾಗಲೂ ಧಾತುಗಳಿಗೆ ಪಾಡುವ, ತೂಗುವ, ಕಂಡ, ಆದ–ಮುಂತಾದ ಕೃದಂತರೂಪಗಳಾಗಬಹುದು. ಸಮಾಸವಾಗಬೇಕೆಂಬ ನಿಯಮವೇನೂ ಇಲ್ಲ.

೨. ಕರ್ಮಧಾರಯವು ವಿಕಲ್ಪವಾದ್ದರಿಂದ ಸಮಾಸ ಬರದಾಗ ಈ ಎರಡು ಶಬ್ದಗಳ ನಡುವೆ ಹೊರತಾದ ಇನ್ನೊಂದು ಶಬ್ದದ ಪ್ರವೇಶವಾಗಲು ಅಡ್ಡಿಯೇನೂ ಇಲ್ಲ.

೩. ಸಮಾಸ ಬರದೆ ಇದ್ದಾಗ ಮೇಲ್ಕಂಡ ಕೃದಂತಗಳು ಅವ್ಯಯಗಳಾಗುತ್ತವೆ. ಆದ್ದರಿಂದ ವ್ಯಸ್ತದಲ್ಲಿ ನಾಮಪ್ರತ್ಯಯದ ಶ್ರವಣವಿಲ್ಲ. ಈ ಅವ್ಯಯ ಸಂಜ್ಞೆ ವಿಕಲ್ಪವಾದ್ದರಿಂದ ಪಾಡುವಂ, ಪಾಡುವಂಗೆ—ಮುಂತಾದ ರೂಪಗಳೂ ಆಗಬಹುದು.

ಹಾಗಾದರೆ ಪಾಡುವ ತುಂಬಿ ಮುಂತಾದ ಗಮಕಸಮಾಸೋದಾಹರಣೆಗಳಲ್ಲಿ (ಕೃದಂತಪೂರ್ವವಾದಾಗ) ಸಮಾಸವಾಗಿದೆಯೆಂದು ಹೇಳುವುದೇಕೆ, ಪಾಡುವ ಮೊದಲಾದವು ಅವ್ಯಯಗಳಾದ್ದರಿಂದ ನಾಮಪ್ರತ್ಯಯದ ಶ್ರವಣವಿಲ್ಲ—ಎಂಬ ಶಂಕೆ ಗಟ್ಟಿಯಾಗಿ ಉಳಿಯುತ್ತದೆ. ಇದಕ್ಕೆ ಸಮಾಧಾನವಿಷ್ಟೆ: ವಿಶೇಷಣ ವಿಶೇಷ್ಯಭಾವ ಇರುವುದರಿಂದ ಇಲ್ಲಿ ಕರ್ಮಧಾರಯ ಸಮಾಸ ಬರಲು ಅಡ್ಡಿಯೇನೂ ಇಲ್ಲ. ಎತ್ತಂಗೋಲ್, ಚುರ್ಚುಂಗೊಳ್ಳಿ ಮೊದಲಾದ ಕಡೆ ಕೃದಂತಗಳಿಗೆ ಸಮಾಸ ಬರುತ್ತಿರುವಾಗ 'ಪಾಡುವ ತುಂಬಿ' ಎಂಬಲ್ಲಿ ಸಮಾಸವನ್ನು ತಡೆಯುವುದು ಹೇಗೆ? ವಿಕಲ್ಪವಾದ್ದರಿಂದ ಸಮಾಸ ಬಂದಿಲ್ಲ ಎಂಬುದು ಬೇರೆ ಮಾತು. ಸಮಾಸವಾದ್ದಕ್ಕೆ ನಿರ್ದಿಷ್ಟ ಪ್ರಯೋಜನವಿಲ್ಲವೆಂಬುದೇನೋ ದಿಟ. ಸಮಾಸವಾದರೂ ಆಗದಿದ್ದರೂ ರೂಪ ಒಂದೇ ಎನ್ನಲಡ್ಡಿಯಿಲ್ಲ. ನೀಲಾಭ್ರಶ್ರೇಣಿಃ ಎಂಬ ಶಬ್ದವನ್ನು ಪರೀಕ್ಷಿಸಬಹುದು. ನೀಲಾ + ಅಭ್ರಶ್ರೇಣಿಃ ಎಂದು ಪದಚ್ಛೇದ. ಇದು ಕರ್ಮಧಾರಯವಾಗಿ ಸಮಸ್ತವಾಗಿದೆಯೊ? ವ್ಯಸ್ತವೊ? ಎರಡೂ ಸಾಧ್ಯ.

ಏವಂಚ ಕೃದಂತಪೂರ್ವಕ ಗಮಕಸಮಾಸಕ್ಕೆ ಕೇಶಿರಾಜನು ಕೊಟ್ಟಿರುವ ಉದಾಹರಣೆ ಗಟ್ಟಿಯಾದ್ದಲ್ಲ. ಇಷ್ಟು ಮಾತ್ರದಿಂದ ಉಳಿದ ಸಂಖ್ಯಾಗುಣವಚನ

ಸರ್ವನಾಮಪೂರ್ವಕವಾದ ಉದಾಹರಣೆಗಳಲ್ಲಿಯೂ ಸಮಾಸವಾಗಿಲ್ಲ ಎಂಬುದು ಸಾಹಸದ ಮಾತು. ಒಟ್ಟಿನಲ್ಲಿ ನಿರ್ಗಳಿತವಾದ ಅರ್ಥ ಹೀಗೆ—

೧. ಗಮಕ ಸಮಾಸವು ಸಮಾಸವೇ ಹೌದು.

೨. ಇದು ಉಳಿದ ಸಮಾಸಗಳಲ್ಲಿ ಅಂತರ್ಗತವಾಗುತ್ತದೆ. ಪ್ರತ್ಯೇಕವಾಗಿ ಇದಕ್ಕೆ ಅಸ್ತಿತ್ವವಿಲ್ಲ.

೩. ಇವರಲ್ಲಿ ಅರಿಸಮಾಸ ದೋಷವಿಲ್ಲವೆಂಬುದೊಂದೇ ವೈಶಿಷ್ಟ್ಯ.

ಗಮಕ ಸಮಾಸವು ಪ್ರತ್ಯೇಕವಾದ ಸಮಾಸವಾಗದೆ ಇತರ ಸಮಾಸಗಳಲ್ಲಿ ಅಂತರ್ಗತವಾಗುವುದರಿಂದಲೇ ನಾಗವರ್ಮನಾಗಲಿ ಭಟ್ಟಾಕಳಂಕನಾಗಲಿ ಇದನ್ನು ಹೆಸರಿಸಿಲ್ಲ. ಕೇಶಿರಾಜನ ಗಮಕಸಮಾಸದ ಸೂತ್ರಕ್ಕೆ ಸಂವಾದಿಯಾದ ಭಟ್ಟಾಕಲಂಕನ ಸೂತ್ರವನ್ನು ನಾವು ಹಿಂದೆ ತೋರಿಸಿದ್ದೇವೆ. ಆ ಸೂತ್ರದಲ್ಲಿ 'ಸಂಸ್ಕೃತೇನ ಚ' ಎಂದು ಹೇಳಿ ಅರಿಸಮಾಸವಾಗುವುದೆಂದು ಭಟ್ಟಾಕಲಂಕನೂ ಒಪ್ಪಿಕೊಂಡಿದ್ದಾನೆ. 'ಗಮಕಸಮಾಸದಿಂ...ಅರಿದಲ್ತೆ ಕನ್ನಡಂ' ಎನ್ನುವ ಕೇಶಿರಾಜನಿಗೆ ಈ ಒಂದು ವೈಶಿಷ್ಟ್ಯವು ಕಣ್ಣೆದುರಿಗಿರಬಹುದೇ ಹೊರತು ಬೇರೆ ಏನೂ ಇಲ್ಲವೆಂದೇ ಹೇಳಬೇಕಾಗಿದೆ. ಈತನ ಗಮಕ ಸಮಾಸದ ಲಕ್ಷಣವೇ ಅವ್ಯವಸ್ಥಿತ.

ಪ್ರಾಸಂಗಿಕವಾಗಿ ಡಾ॥ ಬಿಳಿಗಿರಿಯವರ ಕೆಲವು ಹೇಳಿಕೆಗಳನ್ನಿಲ್ಲಿ ಪರಿಶೀಲಿಸಬೇಕಾಗಿದೆ. ಭಾಷಾಶಾಸ್ತ್ರದ ಹಿನ್ನೆಲೆಯಲ್ಲಿ ಯಾವುದೋ ಅಭಿಪ್ರಾಯವನ್ನಿಟ್ಟುಕೊಂಡು ಮಾತುಗಳನ್ನವರು ಹೆಣೆಯುತ್ತಾರೆ, ನಮಗೆ ಅರ್ಥವಾಗುವುದಿಲ್ಲ. ವ್ಯಾಕರಣ ಶಾಸ್ತ್ರದಲ್ಲಿ ಮಾತಾಡುವಾಗ ವ್ಯಾಕರಣದ ಪರಿಭಾಷೆಯನ್ನು ಬಳಸಿದರೆ ಅರ್ಥವಾದೀತು. ಋಣಾತ್ಮಕವಾದ ಉಪಾಯ, ಧನಾತ್ಮಕವಾದ ತತ್ತ್ವ–ಇತ್ಯಾದಿ ಶಬ್ದಗಳನ್ನು ಅರ್ಥಮಾಡಿಕೊಳ್ಳುವುದು ಕಷ್ಟ. "ಸೀತೆ ಗಾಜಿನ ಬಳೆ ಒಡೆದುಹಾಕಿದಳು–ಎಂಬ ವಾಕ್ಯದಲ್ಲಿ 'ಸೀತೆ ಗಾಜಿನ' ಎಂಬುದು ಈ ವಾಕ್ಯದ ಅಂಗವೇ ಅಲ್ಲ" ಎಂದು ಬರೆದಿದ್ದಾರೆ (ಪು. 75). ವ್ಯಾಕರಣಶಾಸ್ತ್ರದ ಪ್ರಕಾರ ಎಲ್ಲ ಶಬ್ದಗಳೂ ಆಯಾ ವಾಕ್ಯದ ಅಂಗಗಳೇ. 'ಸೀತೆ ಗಾಜಿನ' ಎಂಬುದು 'ನಾನು ಮಲಗಿದೆ' ಎಂಬ ವಾಕ್ಯದ ಅಂಗವಾದೀತೇನು ?

"ಪ್ರಕೃತಿಗಳ ಆನುಪೂರ್ವಿ ಕೇವಲ ಆನುಪೂರ್ವಿಯೋ ಅಥವಾ ಸಮಾಸವೋ ಎಂದು ತಿಳಿದುಕೊಳ್ಳಲು ವರ್ಣನಾತ್ಮಕ ಭಾಷಾವಿಜ್ಞಾನಿಗಳು ಕೆಲವು ಉಪಾಯಗಳನ್ನು ಅಥವಾ ತತ್ತ್ವಗಳನ್ನು" ಬಳಸುತ್ತಾರಂತೆ (ಪು. 75, 76). ಈ ದೃಷ್ಟಿಯೇ ವ್ಯಾಕರಣಶಾಸ್ತ್ರಕ್ಕೆ ಸಂಮತವಲ್ಲ. ಭೂಮಿಯಲ್ಲಿ ಕಬ್ಬಿಣವೋ ತಾಮ್ರವೋ ಹುದುಗಿಕೊಂಡಿರುವಂತೆ ಸಮಾಸ ಎಂಬ ಒಂದು ವಸ್ತು ಭಾಷೆಯಲ್ಲಿ ಹುದುಗಿ

ಕೊಂಡಿರುವುದಿಲ್ಲ. ಸಮಾಸ ಎಂಬುದು ಒಂದಾನೊಂದು ಸಂಜ್ಞೆಯೆಂದು ಹಿಂದೆ ಹೇಳಿದ್ದಾಗಿದೆ. ವ್ಯಾಕರಣಶಾಸ್ತ್ರವು ಇದು ಸಮಾಸವೆಂದರೆ ಸಮಾಸ, ಅಲ್ಲವೆಂದರೆ ಅಲ್ಲ. ಈ ಸಂಜ್ಞೆಯನ್ನಿಟ್ಟದ್ದಕ್ಕೆ ಪ್ರಯೋಜನವೇನೆಂದು ಮಾತ್ರ ಯಾರು ಬೇಕಾದರೂ ಪರೀಕ್ಷಿಸಬಹುದು.

'ದೇವದತ್ತಸ್ಯ ಗುರುಕುಲಂ' ಮುಂತಾದ ಕಡೆ ಏಕದೇಶಾನ್ವಯವಿದ್ದರೂ ಸಮಾಸ ಬಂದಿರುತ್ತದೆ. ಇಂತಹ ಕಡೆ ಮಹಾಕವಿಪ್ರಯೋಗದಿಂದ ಸಾಧುವೆಂದು ಮನ್ನಿಸಿಬಿಡುತ್ತಾರೆಂದೂ ಈ ಮನ್ನಿಸುವಿಕೆಯಿಂದ ಇಂಥ ಸಮಾಸಗಳಿಗೆ ಸಾಧುತ್ವ ಬಂದೊದಗುವುದಿಲ್ಲವೆಂದೂ ಹೇಳಿದ್ದಾರೆ (ಪು. 77). ಇದು ಭ್ರಮೆಯಿಂದಾದ ಹೇಳಿಕೆ. 'ಸಾಪೇಕ್ಷತ್ವೇಽಪಿ ಗಮಕತ್ವಾತ್ ಸಮಾಸಃ' ಎಂದು ವೈಯಾಕರಣರು ಹೇಳುವುದುಂಟು. ಇಂತಹ ಸ್ಥಳದಲ್ಲಿ ಸಮಾಸ ಬರುತ್ತದೆಯೆಂದು ಅವರೇ ಒಪ್ಪಿಕೊಂಡಿದ್ದಾರೆ. ಆದ್ದರಿಂದ ಇದು ಸಾಧುವೇ. ಮಹಾಕವಿಪ್ರಯೋಗದಿಂದ ಇದಕ್ಕೆ ಸಾಧುತ್ವವನ್ನು ಹೇಳಿಲ್ಲ. ವೈಯಾಕರಣರೇ ಇಂತಹ ಸಂದರ್ಭಗಳಲ್ಲಿಯೂ ಸಮಾಸ ಬರುತ್ತದೆಯೆಂದು ಘೋಷಿಸುತ್ತಿರುವಾಗ ಸಮಾಸ ಬರುವುದಿಲ್ಲವೆಂದು ಹೇಳುವುದಕ್ಕೆ ನಾವು ಯಾರು ? ಇಂತಹ ಪ್ರಯೋಗ ಎಲ್ಲ ಭಾಷೆಗಳಲ್ಲೂ ಉಂಟು. ಏಕದೇಶಾ-ನ್ವಯವಿರುವ ಸಮಾಸ ಕನ್ನಡದಲ್ಲಿಲ್ಲ ಎಂದಿರುವುದೂ ಸರಿಯಲ್ಲ. ಈ ಉದಾಹರಣೆಗಳನ್ನು ನೋಡಿ: ಅರಸಿನ ಮನೆ = ಅರಮನೆ. 'ಇದು ಪುಲಿಕೇಶಿಯ ಅರಮನೆ'. ಪುಲಿಕೇಶಿಯೆಂಬ ಅರಸಿನ ಮನೆಯೆಂದರ್ಥ. ಇಲ್ಲಿ ಏಕದೇಶಾನ್ವಯ ಇಲ್ಲವೆ ? ಇದು ಅಸಾಧುಪ್ರಯೋಗವೆಂದು ಡಾ॥ ಪೀಗಿರಿಯವರು ಹೇಳುತ್ತಾರೇನು ? ತಲೆನೋವು, ಕಾಲುಬಳೆ–ಇವು ಸಮಾಸಗಳೆಂದು ಲೇಖಕರೇ ಒಪ್ಪಿಕೊಂಡಿದ್ದಾರೆ. ನನ್ನ ತಲೆನೋವು ವಾಸಿಯಾಯಿತು. ಇದು ಆ ಹುಡುಗಿಯ ಕಾಲುಬಳೆ—ಇಲ್ಲಿ ಏಕದೇಶಾನ್ವಯ ಇಲ್ಲವೆ ? "ಅವನಿಗೆ ಹರ್ಷದಾಯಕವಾದ, ಇವಳಿಗೆ ದುಃಖಜನಕವಾದ" ಎಂಬ ಪ್ರಯೋಗಗಳಲ್ಲಿಯೂ ಏಕದೇಶಾನ್ವಯ ಇದ್ದೇ ಇದೆ. ಇವೆಲ್ಲ ಅಸಾಧುಪ್ರಯೋಗಗಳೇನು ?

"ಹಣೆಗಣ್ಣ ಎಂಬುದು ಸಮಾಸವಲ್ಲ. ಹಣೆಗಣ್ಣು ಎಂಬ ಸಮಾಸಕ್ಕೆ ಅಪ್ರತ್ಯಯ ಹತ್ತಿ ಆಗಿರುವ ತದ್ಧಿತರೂಪ" ಎಂದಿದ್ದಾರೆ (ಪು. 78). ನಿಜ. ಹಾಗೆ ರೂಪಸಿದ್ಧಿಯನ್ನು ಹೇಳಲೂ ಸಾಧ್ಯ. ಆದರೆ ಆಪಕ್ಷದಲ್ಲಿ ಸಮಾಸ ಮತ್ತು ತದ್ಧಿತವೆಂದು ಎರಡು ವೃತ್ತಿಗಳನ್ನು ಆಶ್ರಯಿಸಬೇಕಾಗುತ್ತದೆ. ವೈಯಾಕರಣರಾದರೋ ಬಹುವ್ರೀಹಿ ಸಮಾಸವೆಂಬ ಒಂದೇ ವೃತ್ತಿಯಿಂದ ಈ ಬಗೆಯ ರೂಪಗಳನ್ನು ಸಾಧಿಸುತ್ತಾರೆ. ಈ ಪಕ್ಷದಲ್ಲಿ ಲಾಘವ ಉಂಟು. ನಿಡಿಮೂಗ, ಮುಕ್ಕಣ್ಣ, ನಿಡುದಲೆಯ, ಬಟ್ಟದೊಡೆಯಳ್—ಮೊದಲಾದ ಬಹುವ್ರೀಹಿಗಳಲ್ಲಿ ಸಮಾಸಾಂತವಾಗಿ 'ಅ'ಪ್ರತ್ಯಯ ಕಂಡುಬರುತ್ತದೆ. ಇದು ಮತ್ವರ್ಥೀಯ 'ಅ' ಎಂಬ ತದ್ಧಿತವಾದರೆ, ಸಮಾಸದ ಮೇಲೆ ಮಾತ್ರ ಇಂತಹ ತದ್ಧಿತ ಬರುತ್ತದೆಯೆಂದು ನಿಯಮ

ಮಾಡಬೇಕಾದೀತು. ಇಲ್ಲದಿದ್ದರೆ ತಲೆಯುಳ್ಳವನು ತಲೆಯ, ಕಣ್ಣುಳ್ಳವನು ಕಣ್ಣ– ಎಂಬ ರೂಪಗಳನ್ನು ಒಪ್ಪಬೇಕಾಗುತ್ತದೆ. ವಸ್ತುತಃ ಅಂತಹ 'ಅ' ಎಂಬ ಮತ್ವರ್ಥೀಯಪ್ರತ್ಯಯ ಕನ್ನಡದಲ್ಲಿಲ್ಲ. ಕೇಶಿರಾಜನಾಗಲಿ ಭಟ್ಟಾಕಳಂಕನಾಗಲಿ ಅದನ್ನು ಹೇಳಿಯೇ ಇಲ್ಲ. ಕಿವುಡ, ಕುರುಡ, ಕುಳ್ಳ ಮೊದಲಾದವು ಸ್ವತಃಸಿದ್ಧ ಶಬ್ದಗಳು. ಈ ಶಬ್ದಗಳ ಮೇಲೆ ಭಾವಾರ್ಥದಲ್ಲಿ 'ಉ' ಪ್ರತ್ಯಯ ಬಂದು ಕಿವುಡು, ಕುರುಡು, ಕುಳ್ಳು–ಮೊದಲಾದವು ಸಿದ್ಧವಾಗಿವೆ. ಕಿವುಡ ಶಬ್ದದಿಂದ ಕಿವುಡು ಹುಟ್ಟಿದೆ. ಹಾಗೆಯೇ ಕುರುಡ, ಕುಳ್ಳ ಮೊದಲಾದವು.

ಗಮಕಸಮಾಸವನ್ನೊಪ್ಪದಿದ್ದರೆ 'ಪಾಡುವ, ಆಡಿದ, ಬಿಳಿಯ, ನಿಡಿಯ, ಅ, ಈ, ಅವ' ಮುಂತಾದ ಶಬ್ದಗಳಿಗೆ ಪದತ್ವಸಿದ್ಧಿ ಹೇಗೆ ?–ಎಂಬ ಪ್ರಶ್ನೆ ಡಾ॥ ಬಿಳಿಗಿರಿಯವರನ್ನು ಕಾಡಿಸುತ್ತದೆ. ಆದರೆ 'ಬಿಳಿಯ, ನಿಡಿಯ, ಆ, ಈ, ಅವ' ಎಂಬ ರೂಪಗಳ ಸಿದ್ಧಿ ಹೇಗೆ–ಎಂಬ ಪ್ರಶ್ನೆ ಅವರನ್ನು ಕಾಡಿಸುವುದೇ ಇಲ್ಲ! ಇವುಗಳಿಗೆ ಪದತ್ವವಿಲ್ಲದೆ ಹೋದರೆ ಭಾಷಾಶಾಸ್ತ್ರದವರಿಗೆ ಬರುವ ವಿಪತ್ತು ಏನು ಎಂದು ನಮ್ಮ ಪ್ರಶ್ನೆ! ತಮ್ಮ ಪ್ರಶ್ನೆಗೆ ಉತ್ತರವಾಗಿ " 'ಮಾಡುತೆ, ಮಾಡಿ, ಮಾಡಿದೊಡೆ, ಮಾವಲ್' ಮುಂತಾದ 'ಅಪೂರ್ಣ' ರೂಪಗಳಿಗೆ ಹೇಗೆ ಪದತ್ವ ಸಿದ್ಧಿಸುತ್ತದೆಯೋ ಹಾಗೆಯೇ" ಎಂದು ಹೇಳಿದ್ದಾರೆ (ಪು. 90). ವ್ಯಾಕರಣ ಶಾಸ್ತ್ರದ ಪ್ರಕಾರ ಈ ಕೃದಂತಾವ್ಯಯಗಳಿಗೆ ವಿಭಕ್ತಿಪ್ರತ್ಯಯ ಬಂದು ಲೋಪವಾಗಿದೆಯಾದ್ದರಿಂದ ಇವು ಪದಗಳು. ಡಾ॥ ಬಿಳಿಗಿರಿಯವರು ಈ ವ್ಯಾಕರಣಪ್ರಕ್ರಿಯೆಯನ್ನು ಹಂಗಿಸುತ್ತ ಈ ವೈಯಾಕರಣರು "ತಮ್ಮ ಶಾಸ್ತ್ರನಿಷ್ಠೆಗೆ ತಾವೇ ಬೆನ್ನುತಟ್ಟಿಕೊಳ್ಳುವ ಚತುರರು" ಎಂದಿದ್ದಾರೆ. ತಾವು ಹೇಳುವ ಪರಿಹಾರವೇನೆಂದರೆ–"ಎಲ್ಲೆಲ್ಲಿ 'ಪದ' ಎಂಬುದಕ್ಕೆ ಸಾಧಾರಣ ಲಕ್ಷಣವನ್ನು ಕೊಡಲು ಸಾಧ್ಯವೋ ಅಲ್ಲೆಲ್ಲಾ ಕೊಟ್ಟು, ಆ ಲಕ್ಷಣಗಳಿಲ್ಲದ ಆದರೆ 'ಪದ'ವೆಂದು ಕರೆದದ್ದರಿಂದ ವ್ಯಾಕರಣಕ್ಕೆ ಲಾಘವವನ್ನು ತಂದುಕೊಡುವ ರೂಪಗಳನ್ನೂ ಪದಗಳೆಂದು ಕರೆದು ಬಿಡುವುದು!" (ಪು. 90).

ವ್ಯಾಕರಣಶಾಸ್ತ್ರವು ಇಷ್ಟು ಹಗುರವಾಗಿದ್ದರೆ ಆನಂದವರ್ಧನನು ವೈಯಾಕರಣರನ್ನು 'ಪ್ರಥಮೇ ವಿದ್ವಾಂಸಃ' ಎಂದು ಹೊಗಳುತ್ತಿರಲಿಲ್ಲ. "ವಿಭಕ್ತಿಪ್ರತ್ಯಯಾಂತವಾದದ್ದು ಪದ. ಪದವನ್ನು ಮಾತ್ರ ಪ್ರಯೋಗಿಸಬೇಕು. ಕೇವಲ ಪ್ರಕೃತಿಯನ್ನಾಗಲಿ ಕೇವಲ ಪ್ರತ್ಯಯವನ್ನಾಗಲಿ ಪ್ರಯೋಗಿಸಬಾರದು" ಎಂದು ವ್ಯಾಕರಣ ಶಾಸ್ತ್ರದ ಸಿದ್ಧಾಂತ. ಈ ಸಿದ್ಧಾಂತದ ಬುಡಕ್ಕೇ ಕೊಡಲಿಯನ್ನು ಹಾಕುತ್ತಿದ್ದಾರೇನು? ಇದಕ್ಕೆ ಉತ್ತರ ಹೇಳುವುದು ಬಹಳ ವಿಸ್ತರವಾದೀತು. ಅತಿಸಂಕ್ಷೇಪವಾಗಿ ನಾಲ್ಕು ಮಾತುಗಳನ್ನಿಲ್ಲಿ ಬರೆಯಬಹುದು.

ಅವ್ಯಯಗಳು ಲಿಂಗ (ಪ್ರಾತಿಪದಿಕ) ಗಳಾದ್ದರಿಂದ ಅವುಗಳ ಮೇಲೆ ವಿಭಕ್ತಿ ಪ್ರತ್ಯಯವೇಕೆ ಹುಟ್ಟುವುದಿಲ್ಲವೆಂಬುದಕ್ಕೆ ಭಾಷಾಶಾಸ್ತ್ರದವರು ಸರಿಯಾದ ಕಾರಣವನ್ನು ಹೇಳಬೇಕು. ಅಲ್ಲಂ, ಇಲ್ಲಂ, ಬಚಿಕೆ, ಬಚಿಯಂ, ವಲಂ–ಮುಂತಾದ

ಅವ್ಯಯಗಳ ಮೇಲೆ ಪ್ರತ್ಯಯ ಹುಟ್ಟಿರುವುದನ್ನು ಕಾಣಬಹುದು. ಆದ್ದರಿಂದ ಪ್ರತ್ಯಯ ಹುಟ್ಟುತ್ತದೆಯೆಂದೂ ಬಹಳ ಸ್ಥಳಗಳಲ್ಲಿ ಲೋಪವಾಗುತ್ತದೆಯೆಂದೂ ಹೇಳುವುದು ಶಾಸ್ತ್ರೀಯವಾದ ಉತ್ತರ.

ಸಮಾಸವು ಪದಗಳಿಗೆ ಬರುತ್ತದೆಯೇ ಹೊರತು ಪ್ರಕೃತಿಗಳಿಗಲ್ಲ. ಇದನ್ನೊಪ್ಪಲೇಬೇಕಾಗುತ್ತದೆ. ಇಲ್ಲದಿದ್ದರೆ, ಮಳೆಗಾಲ ಎಂಬಲ್ಲಿ ಮಳೆ ಶಬ್ದದಲ್ಲಿ ಸಂಬಂಧಾರ್ಥವೂ 'ಸತ್ಯ ಹೇಳು' ಎಂಬ ಕ್ರಿಯಾಸಮಾಸದ 'ಸತ್ಯ' ಶಬ್ದದಲ್ಲಿ ಕರ್ಮಾರ್ಥವೂ 'ಹಣೆಗಣ್ಣು' ಎಂಬಲ್ಲಿ 'ಹಣೆ' ಶಬ್ದದಲ್ಲಿ ಅಧಿಕರಣಾರ್ಥವೂ ಯಾವುದರಿಂದ ತೋರುತ್ತದೆ ಎಂಬ ಪ್ರಶ್ನೆಗೆ ಉತ್ತರವಿಲ್ಲದೆ ಹೋಗುತ್ತದೆ. ಆದ್ದರಿಂದ ತಲೆಯ ಮುಂದು ಮುಂದಲೆ, ಮೈಯ ಹೊರಗು ಹೊರಮೈ ಎಂಬ ಅಂಶಿಸಮಾಸಗಳಲ್ಲಿ ಮುಂದು, ಹೊರಗು–ಮೊದಲಾದವು ಪದಗಳೆಂಬುದು ನಿಶ್ಚಿತ. ಇವುಗಳಿಗೆ ಪದತ್ವ ಸಿದ್ಧಿ ಹೇಗೆ? 'ಅವ್ಯಯಗಳಿಗೆ ಪದಸಂಜ್ಞೆ ಬರುತ್ತದೆ' ಎಂದು ಸೂತ್ರಾಂತರವನ್ನು ರಚಿಸುವುದು ಭಾಷಾಶಾಸ್ತ್ರದವರ ಪ್ರಕಾರ ಆವಶ್ಯಕವೇ ಆಗುತ್ತದೆ. ಮತ್ತು ಅವ್ಯಯಗಳಿಗೆ ಪ್ರತ್ಯಯಗಳು ಹತ್ತುವುದಿಲ್ಲ ಎಂಬ ಸೂತ್ರವನ್ನೂ ರಚಿಸಬೇಕಾಗುತ್ತದೆ. ಮೇಲ್ಕಂಡ ಸ್ಥಳಗಳಲ್ಲಿ ಪ್ರತ್ಯಯವಿರುವುದರಿಂದ ಕೆಲವು ಅವ್ಯಯಗಳಿಗೆ ಪ್ರತ್ಯಯ ಹತ್ತುತ್ತದೆಯೆಂದೂ ಹೇಳಬೇಕಾಗುತ್ತದೆ! ಈ ತಲೆನೋವಿನ ಪ್ರಯಾಸಕ್ಕಿಂತ ಸಿದ್ಧವಾಗಿರುವ ಪ್ರತ್ಯಯಗಳು ಕೆಲವೆಡೆ ಲೋಪಹೊಂದುತ್ತವೆಯೆನ್ನುವುದು ಸರಳವಾದ ಮತ್ತು ವೈಜ್ಞಾನಿಕವಾದ ಮಾರ್ಗ.

ಕನ್ನಡದವರು ಸಂಸ್ಕೃತವ್ಯಾಕರಣದ ಮೂಲತತ್ತ್ವಗಳನ್ನು ಅನುಸರಿಸಿದ್ದಾರೆಂಬುದನ್ನು ಗಮನದಲ್ಲಿಟ್ಟಿರಬೇಕು. ಭಾಷಾಶಾಸ್ತ್ರದವರ ಆಕ್ಷೇಪಗಳಿಗೆ ಸಂಸ್ಕೃತ ವ್ಯಾಕರಣದಲ್ಲಿ ಹಲವಾರು ಉತ್ತರಗಳುಂಟು. ವಿಸ್ತಾರಭೀತಿಯಿಂದ ಇಲ್ಲಿ ಪ್ರಸ್ತಾವಿಸಿಲ್ಲ. ವ್ಯಾಕರಣಶಾಸ್ತ್ರವು ಒಂದು ಮಹಾಯಂತ್ರ. ಸೂಕ್ಷ್ಮಾತಿಸೂಕ್ಷ್ಮಗಳಾದ ನಿಯಮಗಳಿಂದ ರಚಿತವಾಗಿರುವ ಈ ಶಾಸ್ತ್ರದಲ್ಲಿ ಮನಬಂದಂತೆ ಕೈಯಾಡಿಸಿದರೆ 'ಷಾಕ್' ಹೊಡೆಯುವುದು ನಿಶ್ಚಿತ. ಸಂಸ್ಕೃತದಲ್ಲಿ ಸಮಾಸವೆನ್ನುವುದಕ್ಕೆ ಇನ್ನೂ ಒಂದು ಪ್ರಯೋಜನ ಉಂಟು. ಉದಾತ್ತ, ಅನುದಾತ್ತ, ಸ್ವರಿತ–ಈ ಸ್ವರಗಳು ಸಮಾಸಸ್ವರಗಳಾಗಿ ಬರುತ್ತವೆ. ತತ್ಪುರುಷ, ಬಹುವ್ರೀಹಿ – ಮೊದಲಾದವುಗಳಿಗೆ ವಿಭಿನ್ನ ಸ್ವರಗಳು ಬರುತ್ತವೆ. 'ಸ್ತೋಕಾನ್ಮುಕ್ತಃ' ಎಂಬ ಶಬ್ದದಲ್ಲಿ ಪಂಚಮೀ ವಿಭಕ್ತಿ ಇದೆ. ಇದು ಸಮಾಸವಲ್ಲವೆಂದು ಭಾಷಾಶಾಸ್ತ್ರಿಗಳು ಸುಲಭವಾಗಿ ಹೇಳಿಬಿಡಬಹುದು. ಇದು 'ಅಲುಕ್ ಸಮಾಸ' ಎಂದು ವ್ಯಾಕರಣಶಾಸ್ತ್ರ ಹೇಳುತ್ತದೆ. ಈ ಅಲುಕ್ ಸಮಾಸದಲ್ಲಿ ಸ್ವರವೇ ಮುಖ್ಯ ಪ್ರಯೋಜನ. ಇದರ ಮೇಲೆ ತದ್ಧಿತ ಬಂದರೆ 'ಸ್ತೌಕಾನ್ಮುಕ್ತಿಃ' ಇತ್ಯಾದಿ ರೂಪಸಿದ್ಧಿಗಳೂ ಸಮಾಸದಿಂದಲೇ ಆಗತಕ್ಕವು. ಭಾಷಾಶಾಸ್ತ್ರದವರ 'ಋಣತತ್ತ್ವ, ಧನತತ್ತ್ವ'ಗಳ ಆಟವೇನೂ ಇಲ್ಲಿ ಸಾಗದು.

---

# ಸಮ-ಸಂಸ್ಕೃತ ಕಾವ್ಯ—ಒಂದು ಟಿಪ್ಪಣಿ

—ಯು. ಕೃಷ್ಣಶರ್ಮಾ

ಕವಿರಾಜಮಾರ್ಗದ ಕಂದವೊಂದು ಹೀಗಿದೆ :—

ಸದಮಳ-ಸಮ-ಸಂಸ್ಕೃತಕಾವ್ಯದ ಹೃದಯಂ ಹರ್ಷಚರಿತಕಾದಂಬರಿಗಳ್ ।
ಮೊದಲಾಗಿ ನೆಗಳ್ದುವಿವರೊಳ್ ಸದಳಂಕಾರಂಗಳಖಿಳಕವಿವಿದಿತಂಗಳ್ ॥

—ಕ. ರಾ. ಮಾರ್ಗ : ೧—೨೬

ಇಲ್ಲಿನ 'ಸದಮಳ' ಹಾಗೂ 'ಸಮ'ಗಳು 'ಸಂಸ್ಕೃತ'ದ ಗುಣಕೀರ್ತನಪರವಾದ ವಿಶೇಷಣಗಳೇ ಹೊರತು 'ಸಮಸಂಸ್ಕೃತ'ವೆಂಬಂತಹ ಪಾರಿಭಾಷಿಕವಾದ ಶಬ್ದವನ್ನು ಇಲ್ಲಿ ಶಂಕಿಸಲಾಗದೆಂದು ವಿದ್ವಾಂಸರು ಅಭಿಪ್ರಾಯಪಟ್ಟಿದ್ದಾರೆ. ಉದಾಹರಣೆಗೆ :—

೧) 'ಶ್ರೇಷ್ಠವಾದ ಸಂಸ್ಕೃತದ ಗದ್ಯಕಾವ್ಯದ ಹೃದಯವೆನಿಸುವಂತೆ 'ಹರ್ಷ ಚರಿತ', 'ಕಾದಂಬರಿ' ಮುಂತಾದವು ಪ್ರಸಿದ್ಧವಾಗಿವೆ. ಈ ಗದ್ಯಕಾವ್ಯಗಳಲ್ಲಿ ಒಳ್ಳೊಳ್ಳೆಯ ಅಲಂಕಾರಗಳು ತುಂಬಿರುವದು ಕವಿಗಳಿಗೆ ಗೊತ್ತೇ ಇದೆ.'

**ಡಾ॥ ಕೆ. ಕೃಷ್ಣಮೂರ್ತಿ.**

ಕವಿರಾಜಮಾರ್ಗದ ಹೊಸಗನ್ನಡ ಗದ್ಯಾನುವಾದ,
ಐ.ಬಿ.ಹೆಚ್. ಪ್ರಕಾಶನ, ೧೯೮೩, ಪುಟ 7

೨) '...ಇಲ್ಲಿ ಸಮಸಂಸ್ಕೃತಶಬ್ದವು ವಿಷಮ ಸಂಸ್ಕೃತಕ್ಕೆ ವಿಪರ್ಯಯವಾಗಿ ಉಕ್ತವಾಗಿದೆಯೇ ವಿನಾ, ಕನ್ನಡಕ್ಕೆ ಸಮ ಎಂಬ ವಿವಕ್ಷೆಯಿಂದ ಉಪಯುಕ್ತವಾಗಿಲ್ಲ.'

**ಡಾ॥ ಕೆ. ಕೃಷ್ಣಮೂರ್ತಿ.**

ಕವಿರಾಜಮಾರ್ಗ (ಕವಿಕಾವ್ಯಪರಂಪರೆ ೧)
ಐ.ಬಿ.ಹೆಚ್. ಪ್ರಕಾಶನ, ೧೯೭೩, ಪುಟ 135

೩) '...ಹಿಂದಿನ ಪದ್ಯದಲ್ಲಿ ಮಾರ್ಗಕಾರನು ಗದ್ಯಲಕ್ಷಣವನ್ನು ಹೇಳಿದ್ದಾನೆ. ಅದಕ್ಕೆ ಸಮವಾದ ಸಂಸ್ಕೃತ ಕಾವ್ಯವೆಂದು ಅರ್ಥಮಾಡುವುದು ಸಮಂಜಸ. ಅಥವಾ

ಸಮಶಬ್ದಕ್ಕೆ ಸರ್ವ ಎಂಬ ಅರ್ಥವೂ ಉಂಟು. 'ಅಥ ಸಮಂ ಸರ್ವಂ'–ಅಮರ.
ಸಮ ಸಂಸ್ಕೃತ ಕಾವ್ಯದ=ಸಮಸ್ತ ಸಂಸ್ಕೃತ ಕಾವ್ಯದ.'

**ವಿದ್ವಾನ್ ಎನ್. ರಂಗನಾಥ ಶರ್ಮಾ**
ಕವಿರಾಜಮಾರ್ಗದ ನೂತನ ಪರಿಷ್ಕರಣ,
ಲೋಚನ : ೧–೨
ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ,
ಬೆಂಗಳೂರು ; ಡಿಸೆಂಬರ್ 1983, ಪುಟ 42

ಈ ಮೇಲಿನ ವಿವರಣೆಗಳಲ್ಲಿ ತೋರಿಸಿದ ಪ್ರಕಾರ 'ಸಮ'ದ ಅರ್ಥಗಳು ಪ್ರಕೃತಕ್ಕೆ ಹೊಂದಿಕೆಯಾಗುತ್ತವೆಯೇ ? ಎಂಬುದೊಂದು ಶಂಕೆ. 'ಶ್ರೇಷ್ಠವಾದ ಸಂಸ್ಕೃತದ ಗದ್ಯಕಾವ್ಯ' ಎಂಬ ವಿವರಣೆಯಲ್ಲಿ 'ಸಮ'ವನ್ನು ಸುತರಾಂ ಕೈಬಿಡಲಾಗಿದೆ. ಶ್ರೇಷ್ಠವೆಂಬುದು 'ಸಮಗಳ'ದ ಅರ್ಥವಾಯಿತು. 'ಸಮ ಸಂಸ್ಕೃತ ಶಬ್ದವು ವಿಷಮ ಸಂಸ್ಕೃತಕ್ಕೆ ವಿಪರ್ಯಯವಾಗಿ ಉಕ್ತವಾಗಿದೆ' ಎಂಬಲ್ಲಿ ವಿಷಮ ಸಂಸ್ಕೃತ ಕಾವ್ಯ ಯಾವುದು ? ಎಂಬುದೊಂದು ಪ್ರಶ್ನೆ ಸಹಜ. ಸಮ ಸಂಸ್ಕೃತ ಕಾವ್ಯ ಎಂದರೆ 'ಗದ್ಯಲಕ್ಷಣಕ್ಕೆ ಸಮವಾದ ಸಂಸ್ಕೃತ ಕಾವ್ಯ' ಎಂಬಲ್ಲಿ 'ಸಮ'ವು ಗದ್ಯಲಕ್ಷಣವನ್ನು ಅನುವಾದಿಸುವ ಬಗೆ ಹೇಗೆಂದು ಸ್ಪಷ್ಟವಾಗಲಿಲ್ಲ. ಸಮಾಸಮಧ್ಯಪತಿತವಾದ ಈ 'ಸಮ'ವು ಹಿಂದಿನ ಪದ್ಯದಲ್ಲಿ ಹೇಳಿದ 'ಗದ್ಯಲಕ್ಷಣ'ವನ್ನು ತಿಳಿಸಲಾರದೇನೋ ! 'ಸಮ'ಕ್ಕೆ ಸರ್ವ ಎಂದು ಅರ್ಥ ಇಟ್ಟುಕೊಂಡಾಗ ಸಂಸ್ಕೃತ ಕಾವ್ಯರಾಶಿಗಳಲ್ಲಿ ಹರ್ಷ ಚರಿತ ಕಾದಂಬರಿಗಳಿರದೇ ಉತ್ತಮ ಕೃತಿಗಳೆಂದಾಗುತ್ತದೆ. 'ಪದ್ಯಂ ಸಮಸ್ತ ಜನತಾಹೃದ್ಯಂ' ಎಂಬ ಮಾತಿನಿಂದ ಗ್ರಂಥಕಾರನಿಗೆ ಪದ್ಯಕಾವ್ಯದ ವಿಷಯದಲ್ಲೇ ಒಲವು ಹೆಚ್ಚೆಂದು ಸೂಚಿತವಾಗಿರುವಾಗ ಆ ಎರಡು ಗದ್ಯಕಾವ್ಯಗಳು ಮಾತ್ರವೇ ಶ್ರೇಷ್ಠವೆಂದು ಮಾರ್ಗಕಾರನು ಹೇಳುತ್ತಾನೆನ್ನಲಾಗದು. ಹೀಗಿರುವಾಗ ಇಲ್ಲಿನ 'ಸಮ' ಶಬ್ದಕ್ಕೆ 'ಸರ್ವ' ಅಥವಾ 'ಸಮಸ್ತ' ಎಂದು ಅರ್ಥ ಮಾಡುವದು ಸಂದರ್ಭಕ್ಕೆ ಒಪ್ಪುವಂತೆ ತೋರುವದಿಲ್ಲ.

ಯದ್ಯಪಿ ಮಾರ್ಗಕಾರನು ಗ್ರಂಥದ ಉದ್ದಕ್ಕೂ ಯಥೇಚ್ಛವಾಗಿ ಪಾದಪೂರಣಾರ್ಥದಲ್ಲಿ ವಿಶೇಷಣಗಳನ್ನು ಬಳಸಿದ್ದು ಕಂಡುಬರುತ್ತದೆ. ವಿಶೇಷಾರ್ಥಗಳು ಹೊಂದದೇ ಇದ್ದಲ್ಲಿ ವಿಶೇಷಣಗಳ ಅರ್ಥಕ್ಕೆ ಹೆಚ್ಚಿನ ಮಹತ್ವ ಕೊಡಬೇಕಾದ್ದಿಲ್ಲ. ವಿಶೇಷಾರ್ಥಗಳು ಹೊಂದಿಕೆಯಾಗುವಂತಿದ್ದರೆ ವಾಕ್ಯಾರ್ಥದಲ್ಲಿ ಅವುಗಳಿಗೆ ಸ್ಥಾನ ಕೊಡುವದು ಉಚಿತವೆನಿಸುತ್ತದೆ. ಇಲ್ಲಿನ 'ಸಮ'ಕ್ಕೆ ಬಂಧಗುಣವೆಂಬ ಅರ್ಥವೇ ಗ್ರಂಥಕಾರನಿಗೆ ವಿವಕ್ಷಿತವೆಂದು ನನ್ನ ಊಹೆ. ಸಮವೆಂಬುದು ದಕ್ಷಿಣ ಮಾರ್ಗದ ಗುಣಗಳ ಪೈಕಿ ಒಂದೆಂಬುದು ತಿಳಿದ ವಿಚಾರ. ಸಂದರ್ಭೋಚಿತವಾಗಿ ಮೃದು ಹಾಗೂ ಸ್ಫುಟವೆಂಬ ಸಮದ ಎರಡು ಬಗೆಗಳೂ ಹರ್ಷಚರಿತ–ಕಾದಂಬರಿಗಳಲ್ಲಿ

ಮುಪ್ಪುರಿಗೊಂಡಿರಬಹುದು. ಅಂತೆಯೇ ಮಾರ್ಗಕಾರನು ಸಮಗುಣ ವಿಶಿಷ್ಟ ಕಾವ್ಯಕ್ಕೆ ಹರ್ಷಚರಿತ ಕಾದಂಬರಿಗಳು ಉದಾಹರಣೆಯೆನ್ನುತ್ತಾನೆ. 'ಮೊದಲಾಗಿ' ಎಂಬುದು ಅನುಕ್ತ ಸಂಗ್ರಾಹಕ. ಸಮಗುಣ ಭೂಯಿಷ್ಠವಾದ ಕಾವ್ಯಗಳೆಲ್ಲವನ್ನೂ 'ಮೊದಲಾಗಿ' ಎಂಬುದರಿಂದ ಸೂಚಿಸಲಾಗಿದೆ. 'ಸಮಗುಣಭೂಯಿಷ್ಠ'ವೆಂಬುದೂ ಕೂಡ ಪ್ರಾಯೋವಾದವೆಂದರಿಯಬೇಕು. ಓಜೋಗುಣಕ್ಕಿಂತೂ ಕಾದಂಬರಿಯು ಹೆಸರಾದುದಷ್ಟೇ.

ಹರ್ಷಚರಿತ-ಕಾದಂಬರಿಗಳು ಸಂಸ್ಕೃತಗದ್ಯಕಾವ್ಯಗಳ ಪೈಕಿ ಶ್ರೇಷ್ಠಕೃತಿಗಳೆಂದು ಇಲ್ಲಿ ಅರ್ಥೈಸಿದ್ದು ಕಂಡುಬರುತ್ತದಷ್ಟೇ. ಆದರೆ ಗ್ರಂಥಕಾರನು ಸಂಸ್ಕೃತ **ಗದ್ಯ** ಕಾವ್ಯಗಳ ಪೈಕಿ ಎಂದು ಹೇಳಿಲ್ಲ. ಅವನು ಹೇಳಿದ್ದು 'ಸಂಸ್ಕೃತ ಕಾವ್ಯಗಳ ಪೈಕಿ' ಎಂದಿಷ್ಟೇ. ಹರ್ಷಚರಿತ ಕಾದಂಬರಿಗಳು ಗದ್ಯಕಾವ್ಯಗಳಾದುದರಿಂದ 'ಸಂಸ್ಕೃತ ಕಾವ್ಯದ' ಎಂಬಲ್ಲೂ 'ಸಂಸ್ಕೃತ **ಗದ್ಯ** ಕಾವ್ಯದ' ಎಂದು ಕೆಲವರು ಅರ್ಥೈಸುತ್ತಾರಾದರೂ ಅದು ಇಲ್ಲಿನ ಅಕ್ಷರಾರ್ಥವಲ್ಲ. 'ಸಂಸ್ಕೃತ ಕಾವ್ಯದ' ಹಾಗೂ 'ಮೊದಲಾಗಿ' ಎಂಬ ಪ್ರಯೋಗಗಳಿಂದ ಎಲ್ಲ ಬಗೆಯ ಸಂಸ್ಕೃತ ಕಾವ್ಯಗಳೂ ಇಲ್ಲಿ ವಿವಕ್ಷಿತವೆನ್ನಬಹುದು. 'ಮೊದಲಾಗಿ' ಪದದಿಂದ ಮಾಘ-ಶಾಕುಂತಲಾದಿಗಳೂ ಕೂಡ ಗ್ರಂಥಕಾರನ ವಿವಕ್ಷೆಗೆ ಒಳಪಡುತ್ತವೆ.

ಹೀಗೆ, 'ಸದಮಳ-ಸಮ-ಸಂಸ್ಕೃತ ಕಾವ್ಯದ' ಪದಕ್ಕೆ ನಿರ್ದುಷ್ಟವೂ ಸಮಗುಣ ವಿಶಿಷ್ಟವೂ ಆದ ಸಂಸ್ಕೃತ ಕಾವ್ಯಗಳಲ್ಲಿ ಹರ್ಷಚರಿತ, ಕಾದಂಬರಿ, ಶಿಶುಪಾಲವಧ, ಶಾಕುಂತಲಾದಿಗಳು ಶ್ರೇಷ್ಠಕೃತಿಗಳೆನಿಸುತ್ತವೆ. ಇವುಗಳಲ್ಲಿ ಸಹೃದಯಚೇತಶ್ಚಮತ್ಕಾರಕಾರಿಗಳಾದ ಅಲಂಕಾರಗಳು ಕೂಡ ತುಂಬಿ ತುಳುಕುತ್ತಿವೆಯೆಂಬುದು ಮಾರ್ಗಕಾರನ ಈ ಕಂದದ ತಾತ್ಪರ್ಯ.

ಮುಂದೆ ಮಮ್ಮಟನು ಹೇಳುವ ಕಾವ್ಯಲಕ್ಷಣವು ಮಾರ್ಗಕಾರನ ಈ ಕಂದದಲ್ಲಿ ಆಕಸ್ಮಿಕವೋ ಎಂಬಂತೆ ಹೊಂದಿಕೊಳ್ಳುತ್ತದೆ. 'ಅದೋಷೌ ಸಗುಣೌ ಸಾಲಂಕಾರೌ ಶಬ್ದಾರ್ಥೌ ಕಾವ್ಯಂ' ಎಂಬುದು ಮಮ್ಮಟನ ಕಾವ್ಯಲಕ್ಷಣ. ಲಾಕ್ಷಣಿಕರು (ಆಲಂಕಾರಿಕರು) ಹೇಳುವ ಕಾವ್ಯಲಕ್ಷಣಕ್ಕೆ ಉದಾಹರಣೆಯಾಗಿ ಹೆಸರಿಸುವಂತಹ ಕಾವ್ಯಗಳ ಪೈಕಿ ಹರ್ಷಚರಿತ, ಕಾದಂಬರಿ, ಶಿಶುಪಾಲವಧ, ಶಾಕುಂತಲವೇ ಮೊದಲಾದ ಕೃತಿಗಳು ಮೊದಲೆಣಿಕೆಗೆ ನಿಲ್ಲುತ್ತವೆಯೆಂಬುದು ಮಾರ್ಗಕಾರನ ತಾತ್ಪರ್ಯ.



---

# ಪಂಪ: ಐದು ಟಿಪ್ಪಣಿಗಳು

—ಸಿ. ಪಿ. ಕೆ.

### ೧. ಒಳ್ಳೆಯ ಕಾವ್ಯ: ಪಂಪನ ಲಕ್ಷಣೀಕರಣ

ಕಾವ್ಯವನ್ನು ಭಾರತೀಯರು ದೃಶ್ಯಕಾವ್ಯ ಮತ್ತು ಶ್ರವ್ಯಕಾವ್ಯ ಎಂದು ಪ್ರಭೇದಿಸಿದರು. ಅವರ ದೃಷ್ಟಿಯಲ್ಲಿ ನಾಟಕ ದೃಶ್ಯಕಾವ್ಯ (ಎಂದರೆ, ನೋಡಬೇಕಾದದ್ದು): ನಾವು ಇಂದು Poetry ಎಂದು ಕರೆಯುತಕ್ಕದ್ದು ಶ್ರವ್ಯಕಾವ್ಯ (ಎಂದರೆ ಕೇಳಬೇಕಾದದ್ದು). ಪಾಶ್ಚಾತ್ಯರಲ್ಲಿ ಈ ಬಗೆಯ ಪ್ರಭೇದ ಕಲ್ಪನೆ ಕಾಣುವುದಿಲ್ಲ. ಭಾರತೀಯ ವಿಭಜನೆ ಅರ್ಥವತ್ತಾಗಿದೆ. ವ್ಯಾಪಕ ಸಾಕ್ಷರತೆಯಾಗಲಿ ಮುದ್ರಣ ಕಲೆಯಾಗಲಿ ಇಲ್ಲದಿದ್ದ ಕಾಲದಲ್ಲಿ. ಒಬ್ಬರು ಓದುವುದನ್ನು ಹಲವರು ಕೇಳುತ್ತಿದ್ದರು ಎಂಬುದು ಕಾವ್ಯವನ್ನು ಶ್ರವ್ಯವೆಂದು ಕರೆದುದರ ವ್ಯಾವಹಾರಿಕ ಕಾರಣ. ಆದರೆ ಇದಕ್ಕೆ ತಾತ್ತ್ವಿಕವಾದ, ಇಂದಿಗೂ ಗ್ರಾಹ್ಯವಾದ ಕಾರಣವೊಂದಿದೆ.

ಕಾವ್ಯ ಮೂಲತಃ ಕಿವಿಗೆ ಉದ್ದಿಷ್ಟವಾದುದು. (ಪಾಶ್ಚಾತ್ಯರೂ ಇದನ್ನೊಪ್ಪುತ್ತಾರೆ). ಅದು, ಕಾರ್ಲೈಲ್ ಹೇಳುವಂತೆ, "musical thought". ಆದರೆ ಅದು ಕಿವಿಯಲ್ಲೆ ನಿಂತುಬಿಡಬಾರದು: ಹಾಗಾದಾಗ, ಅದು ಕಾವ್ಯವಾಗುವುದಕ್ಕಿಂತ ಮಿಗಿಲಾಗಿ ಸಂಗೀತವಾಗುತ್ತದೆ. ಕೇವಲ ನಾದವೆ ಕಾವ್ಯವಲ್ಲ. ಎಷ್ಟೋ ಕೃತಿಗಳು ಬರಿಯ ನಾದಮಯತೆಯಿಂದ ಅಥವಾ ಶೈಲಿಯ ಅರ್ಭಟದಿಂದ ಕರ್ಣಗ್ರಾಹಿಯಾಗುತ್ತವೆ: ಆದರೆ ಅವು ಶ್ರೇಷ್ಠ ಕೃತಿಗಳಾಗುವುದಿಲ್ಲ. ಹಾಗಾದರೆ, ಒಳ್ಳೆಯ ಕಾವ್ಯದ ಆದರ್ಶವೇನು? ಪಂಪ 'ಆದಿಪುರಾಣ'ದಲ್ಲಿ ಹೇಳುತ್ತಾನೆ:

> **ಕಿವಿಯಿಂ ಬಗೆವುಗಲ್ವೊಡೆ ಕೊಂ-**
> ಕುವೆತ್ತ ಪೊಸ ಸುಳಿಯಿಂ ಪುಗುಗುಮುಳಿದುದು ಸಜು ಸ-
> ಯ್ತುವಚಣಿಸೆ ಮಾಡಿ ಸಜು ಸ-
> ಯ್ತುವೋಕುಮದು ಬಗೆಯ ಬಟ್ಟೆಯಿಂ ಮುಟ್ಟುಗುಮೇ (೧–೧೮)

ಕಾವ್ಯ ಕಿವಿಯ ಮೂಲಕ, ಹೃದಯವನ್ನು ಪ್ರವೇಶಿಸಿ ಅದನ್ನು ತಟ್ಟಬೇಕು: ಆಗ ಅದು ಉತ್ತಮ ಕಾವ್ಯ. ಹೃದಯಗ್ರಾಹಿಯಾಗದ ಕಾವ್ಯ ಕಾವ್ಯವಲ್ಲ. ಕೆಲವು ಕೃತಿಗಳು ಕಿವಿಯ ಮೇಲೆ ಹೆಚ್ಚು ಪರಿಣಾಮವೆಸಗದೆ, ನೇರವಾಗಿ ಹೃದಯವನ್ನು ಹೊಗುತ್ತವೆ. ಅಂಥದು ನ್ಯೂನ ಕಾವ್ಯವೆನ್ನಬೇಕಾಗುತ್ತದೆ. ಕಿವಿ, ಎದೆಗಳೆರಡನ್ನೂ ತಣಿಸುತ್ತದೆ, ಸತ್ಕಾವ್ಯ. ಕಿವಿಯೊಂದನ್ನೆ ಹಿಡಿಯುವ, ಇಲ್ಲವೇ ಹೃದಯವೊಂದನ್ನೇ ಮುಟ್ಟುವ ಕವಿತೆ ಪರಿಪೂರ್ಣವಾಗಲಾರದು.

ಮುದ್ರಣಕಲೆಯು ಇಂದಿನ ದಿನಗಳಲ್ಲಿ ಕಾವ್ಯ ಒಂದು ರೀತಿಯಲ್ಲಿ ದೃಶ್ಯ ಅಥವಾ ಚಾಕ್ಷುಷವಾಗಿ ಪರಿಣಮಿಸಿರುವುದೊಂದು ವಿಪರ್ಯಾಸ, ದುರ್ದೈವ. ಇದರಿಂದ ಕಾವ್ಯದ ಸಂಪೂರ್ಣಾನುಭವ ಓದುಗನಿಗೆ ಸಿಕ್ಕುವುದಿಲ್ಲ-ಕರ್ಣಸಂಬಂಧವಾದ ಅದರ ಪರಿಣಾಮ ನಷ್ಟವಾಗುವುದರಿಂದ. ಆದಕಾರಣ, ಕವಿತೆಯನ್ನು ನುರಿತವರಿಂದ ಓದಿಸಿ ಕೇಳಬೇಕು ಅಥವಾ ಸ್ವತಃ ತುಸು ಗಟ್ಟಿಯಾಗಿ ಓದಿಕೊಳ್ಳಬೇಕು, ಸಹೃದಯ. ಕಾವ್ಯ ಎಲ್ಲ ಅರ್ಥಗಳಲ್ಲೂ ಧ್ವನಿ ; ಆದರೆ ಗದ್ದಲವಲ್ಲ.

ಇಷ್ಟಂತೂ ನಿಶ್ಚಿತ : ಕವಿಗೂ ಕಿವಿಗೂ ನಿಕಟ ಸಂಬಂಧವುಂಟು. (ಈ ಪ್ರಾಸದ ಹೊಂದಾಣಿಕೆ ಕನ್ನಡದಲ್ಲಿ ಮಾತ್ರ ಸಾಧ್ಯ !) ಕುವೆಂಪು ಹೇಳುವಂತೆ, "ಕವಿಗೆ ಕರ್ಣಂ ಪ್ರಮಾಣಂ." ಕವಿಗೆ ಮಾತ್ರವಲ್ಲ, ಸಹೃದಯನಿಗೂ ಕರ್ಣವೇ ಪ್ರಮಾಣ.

## ೨. ಪಂಪಭಾರತದ ಮೂರು ಅನಾಮಧೇಯ ಪಾತ್ರಗಳು

ಮಹಾಕವಿ ದೊಡ್ಡ ಪಾತ್ರಗಳನ್ನೆಂತೊ ಅಂತೆ ಸಣ್ಣ ಪಾತ್ರಗಳನ್ನೂ ಶ್ರದ್ಧಾಪೂರ್ವಕವಾಗಿ ಸಜೀವವಾಗಿ ಕಡೆದು ನಿಲ್ಲಿಸುತ್ತಾನೆ. ಪಂಪನನ್ನೆ ತೆಗೆದುಕೊಳ್ಳೋಣ. ಅವನು ಭೀಷ್ಮ, ದ್ರೋಣರಂತಹ ಅತ್ಯುನ್ನತ ಪಾತ್ರಗಳನ್ನು ಚಿತ್ರಿಸಿರುವಂತೆಯೆ ಕೆಲವು ಯಃಕಶ್ಚಿತ್ ಎನಿಸಬಹುದಾದ ಅನಾಮಧೇಯ ಪಾತ್ರಗಳನ್ನೂ ವಿವರಪೂರ್ಣವಾಗಿ, ಅವುಗಳ ಸ್ವಭಾವವೈವಿಧ್ಯ ಹೊರಪಡುವಂತೆ ಚಿತ್ರಿಸಿದ್ದಾನೆ.

ಕುರುಕ್ಷೇತ್ರ ಸಮರದ ಹಿಂದಿನ ದಿನ ಮೂವರು ಯೋಧರ ಮನೆಗಳಲ್ಲಿ ನಡೆದ ಗಂಡ-ಹೆಂಡಿರ ಸಂವಾದಗಳನ್ನು ಪಂಪ ನಮಗೆ ಕೇಳಿಸುತ್ತಾನೆ. ಇಲ್ಲಿ ನಾವು ಗಮನಿಸಬೇಕಾದದ್ದು ಆ ಯೋಧರ ಪತ್ನಿಯರನ್ನು. ಅವರು ಪರಸ್ಪರ ಪಡಿಯಚ್ಚುಗಳಲ್ಲ. ಅವರ ಸ್ವಭಾವಭೇದವನ್ನು ಸೂಕ್ಷ್ಮವಾಗಿ ನಿರುಕಿಸಿ, ಅವರ ಪ್ರತಿಕ್ರಿಯೆಯಲ್ಲಿ ಅದನ್ನು ಸೊಗಸಾಗಿ ದಾಖಲಿಸಿದ್ದಾನೆ, ಪಂಪಕವಿ.

ಒಬ್ಬ ಯೋಧ "ಈ ಪೊಟ್ತಿ ಪೊಬ್ತು ನಾಳೆ ದೇವಲೋಕದ ಕನ್ಯಕೆಯರೋಲಗದೊಳಿರ್ಪೆನ್" ಎಂದಾಗ, ಅವನ ಪತ್ನಿ "ನೀನೆಂದಂತು ಪೋಗಲ್ ತೀರದು, ನಾಳೆ ಮಗುಟ್ದು ಬಂದೆನ್ನೊಳ್ ನೆರೆವೆ" ಎಂದೂ "ಎನ್ನೋಲಿವಾಗ್ಯಮುಂಟು" ಎಂದೂ ಪ್ರತಿಕ್ರಿಯಿಸುತ್ತಾಳೆ. ಈಕೆ ಧೈರ್ಯಶಾಲಿ, ಆಶಾವಾದಿ. ಇಂತಹ ಸ್ತ್ರೀಯರು ವಿರಳ.

ಇನ್ನೊಬ್ಬ ಬಾಯಿಬಿಟ್ಟು ಹೇಳದಿದ್ದರೂ, ಅವನದೂ ವೀರಸ್ವರ್ಗಪ್ರಾಪ್ತಿಯ ನಿರ್ಣಯವೇ. ಅದನ್ನರಿತು ಅವನ ಹೆಂಡತಿ ಹೇಳುತ್ತಾಳೆ :

ತಾಂ ಗಡ ನಾಳೆ ಪೋಗಿ ದಿವಿಜಾಂಗನೆಯೊಳ್ ತೊಡರ್ದಿರ್ಪನಿಲ್ಲಿ ಮಾ-
ಣ್ದಾಂ ಗಡಮಿರ್ಪೆನಂತನಿತು ಬೆಳ್ಳಿನೆ ಮುನ್ನಮೆ ಪೋಗಿ ನಲ್ಮೆಗೆ
ಲ್ಲಂಗೊಳೆ ದೇವಲೋಕದೊಳಧೀಶನನಾನಿದಿರ್ಗೊಳ್ವೆನೋ ಪೊ ಸ
ಗ್ಗಂಗಳೊಳಿರ್ಪ ದೇವತತಿ ತೊಟ್ತಿರೊಳಟ್ತಿಯನಾಗಲೀವೆನೇ (೧೦-೩೫)

ಈ ಹೆಣ್ಣು ಮೊದಲನೆಯವಳಂತೆ ಆಶಾವಾದಿಯಲ್ಲ. ಆದರೆ ಇವಳು ಅಂಜುಕುಳಿಯೇನಲ್ಲ. ಪತಿಯೊಡನೆ ಸಹಗಮನ ಮಾಡುವುದಾಗಿ ನಿರ್ಧರಿಸುತ್ತಾಳೆ. ಆ ನಿರ್ಧಾರದ ಹಿಂದೆ ಸ್ತ್ರೀಸಹಜವಾದ ಅಸೂಯೆಯೂ ಉಂಟು.[1]

ಮಗುದೊಬ್ಬ ಯೋಧನ ಹೆಂಡತಿ "ತನ್ನಾಣ್ಮನ ದೋರ್ವಲದಗುರ್ವಂ ನಚ್ಚಿ", ಆನೆಗಳ ಕುಂಭಸ್ಥಳದ ಹೊಸ ಮುತ್ತುಗಳನ್ನು ತಂದುಕೊಡುವಂತೆ ಕೇಳಿಕೊಂಡು, ಅವನನ್ನು ರಮಿಸುತ್ತಾಳೆ. ಇವಳು ಮೊದಲನೆಯ ಹೆಣ್ಣನ್ನು ಹೋಲುತ್ತಾಳಾದರೂ, ಸ್ತ್ರೀಸಹಜವಾದ ಆಭರಣಪ್ರೀತಿ ಇವಳ ಪಾತ್ರದಲ್ಲಿ ಎದ್ದುಕಾಣುತ್ತದೆ.

ಹೀಗೆ ಮೂವರು ಮಹಿಳೆಯರೂ ಬೇರೆ ಬೇರೆ ವ್ಯಕ್ತಿತ್ವವುಳ್ಳವರಾಗಿದ್ದಾರೆ.[2] ಆದರೆ ಅವರಲ್ಲಿ ಸಮಾನವಾದ ಮೂಲಭೂತ ಗುಣವೊಂದುಂಟು: ಸಾವಿನ ಬಗೆಗೆ ನಿರ್ಭೀತಿ. ಈ ಅಂಶದಲ್ಲಿ ಅವರು ತಮ್ಮ ಪತಿಗಳಿಗೇನೂ ಕಡಮೆಯಿಲ್ಲ. ಆದ್ದರಿಂದ ಈ ದಂಪತಿಗಳೆಲ್ಲ – ಇವರು ಹತ್ತನೆಯ ಶತಮಾನದವರೇ – ಮೃತ್ಯುಂಜಯರು. ಅವರು ಮಾತ್ರವಲ್ಲ, ಪಂಪ ಕೂಡ!

## ೩. ಪಂಪನಲ್ಲಿ ಪೂರ್ವಾಪರ ಸಾಂಗತ್ಯ: ಒಂದು ನಿದರ್ಶನ

ಪಂಪಭಾರತದಲ್ಲಿ ಕೃಷ್ಣ ರಾಯಭಾರ ಪ್ರಸಂಗ. ತನ್ನ ಹಿತವಚನಕ್ಕೆ ದುರ್ಯೋಧನ ಬೆಲೆಕೊಡದೆಹೋದಾಗ, ಕೃಷ್ಣ ಅವನಿಗೆ ಉಗ್ರವಾದ ಎಚ್ಚರಿಕೆ ಕೊಡುತ್ತಾನೆ: "ಪಾಂಡವರ ಕೆಯ್ಯೊಳ್ ನಿನ್ನ ನಿಸೇಕಮಾಗದೇ" (೯–೪೯). ಇದೊಂದು ಶಕ್ತಿಪತ್ತಾದ ದೇಸಿನುಡಿ. 'ನಿಸೇಕ' ಎಂದರೆ ಇಲ್ಲಿ ('ಹಬ್ಬ' ಎಂದ ಹಾಗೆ) 'ಶಾಸ್ತಿ' ಎಂದರ್ಥ. 'ನಿಸೇಕ'ದ ಈ ಭಾವಾರ್ಥ ಮಾತ್ರವಲ್ಲದೆ, 'ಪ್ರಸ್ತ'ವೆಂಬ ಅಕ್ಷರಾರ್ಥವೂ ಇಲ್ಲಿ ಸಂಗತವಾಗುತ್ತದೆ ಎನ್ನುವುದು ಸ್ವಾರಸ್ಯದ ಅಂಶ.

ನಾವು ಎರಡು ಮೂರು ಪದ್ಯಗಳಷ್ಟು ಹಿಂದಕ್ಕೆ ಹೋಗಬೇಕು. ದುರ್ಯೋಧನ ಕೃಷ್ಣನಿಗೆ ಹೇಳುತ್ತಾನೆ: "ಇಳಾಲತಾಂಗಿ ಪ್ರಮುವಲ್ಲಳ್" (೯–೪೬).

---

1 ಪಂಪ ಉತ್ಪ್ರೇಕ್ಷಿಸುತ್ತಿಲ್ಲ; ಜನಜೀವನದ ನಂಬಿಕೆಗಳ ಮೇಲೆ ಬೆರಳಿಟ್ಟು ಬರೆದಿದ್ದಾನೆ. ಒಂದು ಕುತೂಹಲಕರವಾದ ಸಂವಾದಿ ಆಧುನಿಕ ಸಾಹಿತ್ಯದಲ್ಲಿ ಕಂಡುಬರುತ್ತದೆ. ಜಿ. ವೆಂಕಟಯ್ಯನವರು ಬರೆದಿರುವ 'ನಿಸರ್ಗದ ಮಡಿಲು' ಕೃತಿಯಲ್ಲಿ ಸೋಲಿಗ ಜನಾಂಗದ ಜೀವನ ಚಿತ್ರಗಳು ಬರುತ್ತವೆ. ತನ್ನ ಪತಿ ಇನ್ನೊಬ್ಬಳು ಹೆಣ್ಣಿನಲ್ಲಿ ಅನುರಕ್ತನಾಗಿ ಅವಳೊಡನೆ ನಾಪತ್ತೆಯಾದಾಗ, ಹೆಂಗಸೊಬ್ಬಳು ಹೇಳುವ ಮಾತು ಇದು: "ಇಲ್ಲಿ, ಅವ್ನ ಮುಂದಿನ ಲೋಕದಾಗೆ ನಾ ಹಿಡಿದೆ ಹೋಪ್ರೆ ನಾ ಹೆಣ್ಣೆ?" (ಪು. ೧೬). ಪಂಪ ನಮಗೆ ಸಮಕಾಲೀನನೆನಿಸುವುದು ಈ ಬಗೆಯ ಚಿತ್ರಣದಿಂದ.

2 ಮೂವರೂ ಮೂರು ವರ್ಗಗಳನ್ನು ಪ್ರತಿನಿಧಿಸುತ್ತಾರೆನ್ನಬಹುದು. ಮೊದಲನೆಯ ವರ್ಗ ನಮಗೆ ಮೆಚ್ಚಾಗುವಷ್ಟು ಎರಡನೆಯದು ಆಗುವುದಿಲ್ಲ; ಅಂತೆಯೆ, ಎರಡನೆಯದರಷ್ಟು ಶ್ಲಾಘ್ಯವಾಗುವುದಿಲ್ಲ, ಮೂರನೆಯದು.

ಈಗ "ಇಳಾಲತಾಂಗಿ"ಗೂ 'ನಿಸೇಕ'ಕ್ಕೂ ನಾವು ಸಂಬಂಧ ಕಲ್ಪಿಸಿಕೊಳ್ಳ ಬೇಕು : ಕೃಷ್ಣನ ಮಾತಿನಲ್ಲಿ ಅದು ಇಂಗಿತವಾಗಿದೆ. "ಪಾಂಡವರು ಭೂಮಿಯೆಂಬ ಹೆಣ್ಣಿನೊಡನೆ ನಿನಗೆ ಪ್ರಸ್ತ ಮಾಡುತ್ತಾರೆ" ಎಂದು ಅವನು ವ್ಯಂಗ್ಯವಾಗಿ ಆಡು ತ್ತಿದ್ದಾನೆ: "ನೀವೆಲ್ಲ ನೆಲಕ್ಕೊರಗುತ್ತೀರಿ" ಎಂಬುದು ಅವನ ಅಭಿಪ್ರಾಯ. 'ನಿಸೇಕ'ಕ್ಕೆ 'ಅಭಿಷೇಕ' ಎಂದೂ ಅರ್ಥವಾಗಬಹುದು. "ಪಾಂಡವರು ನಿನಗೆ ರಾಜ್ಯಾಭಿಷೇಕ ಮಾಡುತ್ತಾರೆ" ಎಂಬ ಕಟಕಿಯೂ ಇದ್ದೀತು, ಕೃಷ್ಣನ ಉಕ್ತಿಯಲ್ಲಿ.

ಪಂಪನ ಪ್ರತಿಭೆ ಹೇಗೆ ಸುಸಂಬದ್ಧವಾಗಿ, ಪೂರ್ವಾಪರ ಸಾಮಂಜಸ್ಯವನ್ನು ಕಾಪಾಡಿಕೊಂಡು, ಧ್ವನಿಪೂರ್ಣವಾಗಿ ಕೆಲಸಮಾಡುತ್ತದೆ ಎಂಬುದಕ್ಕೆ ಇದೊಂದು ಸಣ್ಣ ಉದಾಹರಣೆ. ಆ ಸುಸಂಬದ್ಧತೆ, ಧ್ವನಿಗಳನ್ನು ಗ್ರಹಿಸಿದಾಗ ಕಾವ್ಯದ ಆಸ್ವಾದ ಗಾಢತರವಾಗುತ್ತದೆ.

## ೪. ಪಂಪನ ಪ್ರಮಾದ

"ಹೋಮರನೂ ತೂಕಡಿಸುತ್ತಾನೆ" ಎಂಬುದು ಪ್ರಸಿದ್ಧೋಕ್ತಿಯಷ್ಟೆ. ಹಾಗೆ ನೋಡಿದರೆ, ಎಲ್ಲ ಮಹಾಕವಿಗಳೂ ತೂಕಡಿಸುತ್ತಾರೆ (ಸಾಮಾನ್ಯ ಕವಿಗಳಂತೂ ಸರಿಯೆ). ಪಂಪ ಈ ಮಾತಿಗೆ ಹೇಗೆ ಅಪವಾದವಾದಾನು ? ಒಂದು ನಿದರ್ಶನ :

ದ್ರೌಪದೀ ಕೇಶಾಕರ್ಷಣ ಪ್ರಕರಣದಲ್ಲಿ ಪಂಪ ಭೀಮನಿಂದ "ಉಡಿವೆಂ ಪಿಂಗಾಕ್ಷನೂರುದ್ವಯಮನುರುಗದಾಘಾತದಿಂ..." (೭-೧೩) ಎಂದು ಪ್ರತಿಜ್ಞೆ ಮಾಡಿಸಿದ್ದಾನೆ. (ಆ ಪದ್ಯವೇನೊ ಚೆನ್ನಾಗಿದೆ.) ಆದರೆ ಈ ಊರುಭಂಗ ಪ್ರತಿಜ್ಞೆಗೆ ಪಂಪನಲ್ಲಿ ಕಾರಣವೆ ಇಲ್ಲವೆಂಬುದು ಸ್ವಾರಸ್ಯದ ಅಂಶ. ಮೂಲಭಾರತದಲ್ಲಾದರೆ, ದುರ್ಯೋಧನ ದ್ರೌಪದಿಗೆ ತನ್ನ ತೊಡೆ ತೋರಿಸಿದನಾದ್ದರಿಂದ, ಭೀಮ ಅವನ ತೊಡೆ ಮುರಿಯುವ ಪ್ರತಿಜ್ಞೆ ಮಾಡಿದ್ದು ಸಹಜವಾಗಿದೆ. ಪಂಪನಲ್ಲಿ, ದುರ್ಯೋಧನ ತೊಡೆ ತೋರಿಸುವ ವಿಷಯವಿಲ್ಲ. (ಅದನ್ನು ಪಂಪ ಬಿಟ್ಟುದಕ್ಕೆ ಅವನವೇ ಆದ ಕಾರಣ ಗಳಿವೆ.) ಎಂದಮೇಲೆ, ಭೀಮನ ಭೀಕರ ಪ್ರತಿಜ್ಞೆಗೆ ಸುಯೋಧನನ ನಿರಪರಾಧಿ ಯಾದ ತೊಡೆ ಏಕೆ ಗುರಿಯಾಗಬೇಕು ?

ಪಂಪನಿಗೆ ಇಲ್ಲಿ ಮರೆವು ಕವಿಯಿತು.[3]

---

3 ಅವನು ವ್ಯಾಸಭಾರತವನ್ನು ಕೆಲವಂಶಗಳಲ್ಲಿ ಬದಲಿಸಹೊರಟು ತೊಡಕುಗಳಿಗೆ ಸಿಕ್ಕಿದ್ದಾನೆ. ದ್ರೌಪದಿಯ ಪಕಪತಿತ್ವದ ಸಮಸ್ಯೆಗಳನ್ನು ವಿದ್ವಾಂಸರು ಎತ್ತಿ ತೋರಿದ್ದಾರೆ. ಮೇಲಿನದೂ ಭಾಗಶಃ ಅದಕ್ಕೆ ಸಂಬಂಧಿಸಿದ್ದೇ.

## ೫. ಪಂಪನ ಗೆಲುವು

ಪಂಪಭಾರತವನ್ನೂ ಕುಮಾರವ್ಯಾಸ ಭಾರತವನ್ನೂ ತೂಗಿನೋಡಿದರೆ, ಮೊದಲನೆಯದರಲ್ಲಿ ಅನೇಕ ಪರಿಮಿತಿಗಳು ಕಂಡುಬರುತ್ತವೆ ; ಅವುಗಳನ್ನು ವಿಮರ್ಶಕರು ಗುರುತಿಸಿ ಪಟ್ಟಿಹಾಕಿರುವುದುಂಟು. ಕುಮಾರವ್ಯಾಸನಿಗಿಲ್ಲದ ಕೆಲವು ವೈಯಕ್ತಿಕ ಉಪಾಧಿಗಳು ಪಂಪನಿಗಿದ್ದುವು. ಇದೆಲ್ಲ ಸರಿಯೇ. ಆದರೆ ವಿಷಯದ ಇನ್ನೊಂದು ಮುಖವನ್ನೂ ಗಮನಿಸಬೇಕು.

ಕುಮಾರವ್ಯಾಸ ಉದ್ದಕ್ಕೂ ವ್ಯಾಸರನ್ನು ಶ್ರದ್ಧೆಯಿಂದ ಅನುಸರಿಸಿಕೊಂಡು ಹೋಗಿದ್ದಾನೆ ; ಅವರ ಹೆಗಲ ಮೇಲೆ ಕುಳಿತುಕೊಂಡು ದೊಡ್ಡವನಾಗುವುದು ಅವನಿಗೆ ಸುಲಭವಾಯಿತು. ಪಂಪ ಆ ಅವಕಾಶವನ್ನು ತಾನಾಗಿಯೆ ನಿರಾಕರಿಸಿ, ಬಹಳ ಕಡೆ ತನ್ನದೇ ಮಾರ್ಗವನ್ನು ಹಿಡಿಯುತ್ತಾನೆ. ಅಂಥಲ್ಲಿ ಮಹತ್ತನ್ನು ಸಾಧಿಸಲು ಅವನು ಕಷ್ಟಪಡಬೇಕಾಗುತ್ತದೆ : ಸಾಧಿಸಿದ್ದಾನೆ, ಎಷ್ಟೋ ಕಡೆ.

ಕುಮಾರವ್ಯಾಸನ ಪ್ರತಿಭೆ ಲೌಕಿಕ, ಧಾರ್ಮಿಕ ಎಂಬ ದ್ವಂದ್ವಕ್ಕೆ ಒಳಗಾಗದೆ ಏಕತ್ರ ಕೆಲಸ ಮಾಡಿರುವುದೂ ಪಂಪನ ಪ್ರತಿಭೆ ಎರಡು ಕೃತಿಗಳಲ್ಲಿ ಹಂಚಿಹೋಗಿರುವುದೂ ನಿಜ. ಆದರೆ ಪಂಪ ಧರ್ಮಪ್ರಕಾಶನಕ್ಕಾಗಿಯೆ ಬೃಹತ್ಕೃತಿಯೊಂದನ್ನು ಮೀಸಲಿಟ್ಟಿದ್ದಾನೆಂಬುದನ್ನು ಮರೆಯಬಾರದು. ಅಲ್ಲಿ, ಕುಮಾರವ್ಯಾಸಭಾರತದಲ್ಲಿರುವುದಕ್ಕಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಅಧ್ಯಾತ್ಮ ಮೈದೋರಿದೆ. ಆತ್ಮವಿಕಾಸದ ಸಂಪೂರ್ಣ ಚಿತ್ರವೊಂದನ್ನು `ಆದಿಪುರಾಣ'ದಲ್ಲಿ ಕಾಣುತ್ತೇವೆ.[4] ಆದ್ದರಿಂದ ಪಂಪನ ಎರಡು ಕಾವ್ಯಗಳನ್ನೂ ಏಕಕಾಲದಲ್ಲಿ ಒಮ್ಮೆಲೆಯಾಗಿ ಗ್ರಹಿಸಿದಾಗ ಮಾತ್ರ ಅವನ ಹಿರಿಮೆ ಸಂವೇದ್ಯವಾಗುತ್ತದೆ.[5]

ಹೀಗೆ ಹೇಳಬಹುದು : ಪಂಪ ತನ್ನ ಕಾವ್ಯಜೀವನದಲ್ಲಿ ಕೆಲವೊಮ್ಮೆ ಸೋತಿದ್ದಾನೆ : ಆದರೆ ಸೋತು ಗೆದ್ದಿದ್ದಾನೆ, ಅಂತಿಮವಾಗಿ.

---

4 ಕುಮಾರವ್ಯಾಸ ತನ್ನ ಕೃತಿಯನ್ನು ದಶಪರ್ವಗಳಿಗೆ ಪರಿಮಿತಿಗೊಳಿಸಿಕೊಂಡುದೂ ಗಮನಾರ್ಹ. ಪಂಪನೂ ಹಾಗೆ ಮಾಡಿದ್ದಾನೆ; ಆದರೆ ಆ ಕೊರತೆಯನ್ನು 'ಆದಿಪುರಾಣ'ದಲ್ಲಿ ಭರಿಸಿಕೊಂಡಿದ್ದಾನೆ.

5 "ಬೆಳಗುವೆನಿಲ್ಲಿ ಲೌಕಿಕಮಂ. ಅಲ್ಲಿ ಜಿನಾಗಮಮಂ" ಎಂದು ಭಾರತದಲ್ಲಿ ಪಂಪ ಹೇಳುವಾಗ, ತನ್ನೆರಡು ಕೃತಿಗಳನ್ನೂ ಒಟ್ಟಿಗೇ ಪರಿಗಣಿಸಬೇಕೆಂದು ಸಹೃದಯರಿಗೆ ಅವನು ಸೂಚಿಸುವಂತೆ ತೋರುತ್ತದೆ.

# ಹಲ್ಮಿಡಿ ಶಾಸನದ ಮೇಲೆ ಹೊಸ ಬೆಳಕು—ಒಂದು ಟಿಪ್ಪಣಿ

—ಸದ್ಯೋಜಾತ ಮೂರ್ತಿ

ಹಲ್ಮಿಡಿ ಶಾಸನ ಕಾಲನಿರ್ದೇಶನದಿಂದ ಬಹಳ ಹಿರಿದಾದುದು. ಪ್ರಾಚೀನ ಕನ್ನಡ ಶಾಸನವೆಂದರೆ ಇದೇ. ಇದನ್ನೇ ಕನ್ನಡದ ಪ್ರಥಮ ಶಾಸನವೆಂದೂ ಕರೆದಿದ್ದಾರೆ. ೧೯೩೬ರಲ್ಲಿ ಇದರ ವಿಶ್ಲೇಷಣೆ ಮಾಡುತ್ತಾ ಡಾ॥ ಎಂ. ಹೆಚ್. ಕೃಷ್ಣರವರು ತಮ್ಮ ನಿಲುಗಡೆಗೆ ಸಿಕ್ಕ ಎಲ್ಲ ಕನ್ನಡ ಪದಗಳನ್ನೂ ವಿಶ್ಲೇಷಿಸಿ "ಇದಮಿತ್ಥಂ" ಎಂದು ನಿರ್ದೇಶಿಸಿರುವರಷ್ಟೆ. ಇದರಲ್ಲಿನ **ಅಳುಕದಮ್ಬನ್** ಎಂಬ ಪದವು, ಇಲ್ಲಿಯವರೆಗೆ ಯಾರ ಒರೆಗಲ್ಲಿಗೂ ಸಿಕ್ಕದೆ ಇರುವುದು ಸೋಜಿಗವಾಗಿದೆ.

ಈಗ ಮೈಸೂರಿನ ಶಾಸನ ಇಲಾಖೆಯಲ್ಲಿ ರಕ್ಷಿತವಾಗಿರುವ ಈ ಶಾಸನದಲ್ಲಿ ೧೬ ಸಾಲುಗಳಿದ್ದು ಮತ್ತೊಂದು ಸಾಲು ಎಡಪಕ್ಕದಲ್ಲಿ ಬರೆದಿದೆ. ಈ ಶಾಸನದ ೧೩ನೇ ಸಾಲಿನ "ಅಳುಕದಮ್ಬನ್" ಎಂಬ ಪದದ ವಿಶ್ಲೇಷಣೆಯೇ ಈ ಲೇಖನದ ಉದ್ದೇಶ ಹಾಗೂ ಒಂದು ಪ್ರಾಮಾಣಿಕ ಪ್ರಯತ್ನ.

**೧೩ನೆಯ ಸಾಲು ಹೀಗಿದೆ:**

**"ಟ್ಟಾರ್ ಬಟಾರಿ ಕುಲದೊನಳುಕದಮ್ಬನ್ಕಳ್ದೋನ್ ಮಹಾಪಾತಕನ್"**

ಪೂರ್ವಸೂರಿಗಳಂತೆ ಪದ ವಿಭಾಗ ಮಾಡಿದರೆ—

**"ಟ್ಟಾರ್ । ಬಟಾರಿ । ಕುಲದೋನ್ । ಅಳುಕದಮ್ಬನ್ ।**
**ಕಳ್ದೋನ್ । ಮಹಾಪಾತಕನ್ ।" ಎಂದಾಗುತ್ತದೆ.**

ಈ ಪದ ವಿಭಾಗ ಲೇಖಕನ ದೃಷ್ಟಿಯಲ್ಲಿ ಸರಿಯಲ್ಲ.

"ಕುಲದೋನ್" ಎಂಬ ಪದದ ಕೊನೆಯ ಅಕ್ಷರ "ನ"ಕಾರ ದೀರ್ಘಸ್ವರವಾಗಬೇಕಿತ್ತು. ಯಾರ ಅಚಾತುರ್ಯವೋ ಏನೋ ಈಗಿರುವಂತೆ ಓದಿಕೊಂಡರೆ ಒಂದು ಮಹತ್ವದ ವಿಷಯ ಬೆಳಕಿಗೆ ಬರುವಂತೆಯೇ ಇಲ್ಲ. (ಅ<ಅ)

'ಬಟಾರಿ ಕುಲದೋನ್ ಅಳುಕದಮ್ಬನ್' ಎನ್ನುವುದು 'ಬಟಾರಿ ಕುಲದವನಾಗಿರುವ ಅಳುಕದಮ್ಬನು' ಆಗುತ್ತದೆ. **ಅಳು** ಎನ್ನುವ ಪದಕ್ಕೆ **ಆಳುವ ಅರಸು** ಎಂಬ ಪರ್ಯಾಯ ಪದ ಕಿಟ್ಟೆಲ್ ಕೋಶದಲ್ಲಿ ಸಿಗುತ್ತದೆ (ನೋಡಿ: ಕಿಟ್ಟೆಲ್ ಕೋಶ–ಪುಟ 181).

ಅಳುಕದಮ್ಬನು = ಪಶುಪತಿ ಎಂಬುದಾಗಿ ಡಾ॥ ಎಂ. ಬಿ. ನೇಗಿನಹಾಳ ಅವರು ಅರ್ಥೈಸಿರುತ್ತಾರೆ (ನೋಡಿ: ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ, ಸಂ. ೬೬–೬೭. ಸಂ. ೨. ೧–ಡಿಸೆಂಬರ್ ೧೯೮೧ ಜೂನ್ ೧೯೮೨)..

ಅವರ ಹೇಳಿಕೆಯಂತೆ ೧೩ನೇ ಸಾಲಿನ ಅರ್ಥ ಇಂತಿದೆ: ಭಟಾರಿ ಕುಲದವನಾದ ಅಳುಕದಂಬನು (ಪಶುಪತಿಯು) (ಈದಾನವನ್ನು) ಅಪಹರಿಸಿದವನು ಮಹಾಪಾತಕನು.

ಇದನ್ನೇ ಈ ಕೆಳಗಿನಂತೆ ಬರೆದರೆ "ಬಟಾರಿ ಕುಲದೊನಾಳು (ನ್+ಅ+ಅ) ಕವಂಬನ್ ಕಳ್ದೊನ್ ಮಹಾಪಾತಕನ್" ಆಗುತ್ತದೆ. ಬಟಾರಿ ಕುಲದೋನ್= ಬಟಾರಿ ಕುಲದವನಾದ, ಆಳು=ಆಳುವ ಅರಸನಾದ, ಕವಂಬನ್=ಕದಂಬನು.

ಆಳುವ ಅರಸನಾದ ಕದಂಬನು ಬಟಾರಿ ಕುಲದವನು (ಈ ಶಾಸನವನ್ನು) ಕಳ್ದೊನ್–ಅಪಹರಿಸಿದವನು, ಮಹಾಪಾತಕನ್–ಮಹಾಪಾತಕನು.

"ಆಳು ಕದಮ್ಬನ್" ಇಲ್ಲಿ ಸರಿಯೆಂದು ಲೇಖಕನ ಆಶಯ. ಆದಾಗಿ ಶಾಸನ ಪಾಠದ ಸರಿಯಾದ ಅರ್ಥ ಹೀಗಿದೆ : ಭಟಾರಿ ಕುಲದವನಾದ ಆಳುವ ಅರಸನಾದ ಕದಂಬನ (ಈ ಶಾಸನವನ್ನು) ಅಪಹರಿಸಿದವನು ಮಹಾಪಾತಕನು, ಎಂದಾಗುತ್ತದೆ.

ಶಾಸನದ ಪೂರ್ಣ ಪಾಠ ಇಂತಿದೆ (ಅನ್ವಯಾರ್ಥ ಮಾಡಿದಂತೆ) :

ನಮಸ್ಕಾರ. ಶ್ರೀಮತ್ ಕದಂಬರ ಅಧಿರಾಜನು ತ್ಯಾಗಸಂಪನ್ನನೂ ಕಲಭೋರನ ವೈರಿಯೂ (ಆದ) ಕಾಕುಸ್ಥ ಭಟ್ಟಾರಕನು ಆಳುತ್ತಿರಲು ನರಿದಾವಿಳೆ ನಾಡಿನಲ್ಲಿ ಮೃಗೇಶ ಮತ್ತು ನಾಗರೆಂಬ (ವೈರಿ) ಭಯಂಕರರು ಭಟಪರಾಗಿದ್ದಾರೆ (ಅಧಿಕಾರಿಗಳಾಗಿದ್ದಾರೆ). (ಆ) ಮೃಗೇಶ ಮತ್ತು ನಾಗರೆಂಬ ಹೆಸರಿನವರಿಬ್ಬರು ಮತ್ತು) ಭಟಾರಿ ವಂಶವೆಂಬ ನಿರ್ಮಲವಾದ ಆಕಾಶಕ್ಕೆ ಚಂದ್ರನು, ಆಳುಪರೆಂಬ ಗಣಕ್ಕೆ ಶಿವನು (ಆಳುಪರ ಒಡೆಯನು), ದಕ್ಷಿಣಾ ಪಥದಲ್ಲಿ ಪ್ರಸಿದ್ಧವಾದ ನೂರಾರು ಯುದ್ಧಗಳೆಂಬ ಯಜ್ಞಗಳಲ್ಲಿ (ವೈರಿಗಳೆಂಬ) ಪಶುಗಳನ್ನು ಬಲಿಗೊಡುವ ಸಾಹಸ ಕಾರ್ಯಗಳಿಂದ ತುಂಬಿರುವವನು, ದಾನ ಕೊಡುವಲ್ಲಿ (ವರವೀಯುವ) ಶಿವನೆಂದು ಹೊಗಳಲ್ಪಟ್ಟವನು (ಮತ್ತು ಪಶುಪತಿಯೆಂದು ಹೆಸರುಳ್ಳವನು, ಸರಕ್ಕೆಲ್ಲ ಭಟಾರಿಯ ಪ್ರೀತಿಯ ಮಗನಿಗೆ ಸೇಂದ್ರಕ ಮತ್ತು ಬಾಣರೆಂಬ ಉಭಯ ದೇಶಗಳ ವೀರಪುರುಷರ ಸಮಕ್ಷಮದಲ್ಲಿ ಕೇಕಯ (ಮತ್ತು) ಪಲ್ಲವರನ್ನು ಹೋರಾಡಿ ಇರಿದು ಜಯ ಸಂಪಾದಿಸಿದ ವಿಜ ಅರಸನಿಗೆ ಬಾಳ್ಗಚ್ಚು (ಎಂದು) ಪಲ್ಮಡಿ ಮತ್ತು ಮೂಜಿ ವಳ್ಳಿ ಗಳನ್ನು ಕೊಟ್ಟರು. **ಭಟಾರಿ ಕುಲದವನೂ, ಆಳುವ ಅರಸನೂ ಆದ ಕದಂಬನ ಈ ದಾನ ವನ್ನು ಅಪಹರಿಸಿದವನು ಮಹಾಪಾತಕನು.*** (ಈ) ಇಬ್ಬರೂ ಸಟ್ಟಿಜ್ಗದವರಾದ ವಿಜ ಅರಸರೂ ಪಲ್ಮಡಿಗೆ ಕುಜುಮ್ಬಿಡಿಯನ್ನು ಬಿಟ್ಟರು. ಅದನ್ನು ನಾಶಪಡಿಸುವವನಿಗೆ ಮಹಾಪಾತಕ ತಟ್ಟುತ್ತದೆ. ಒಳಿತಾಗಲಿ. ಭಟ್ಟರಿಗೆ (ಬ್ರಾಹ್ಮಣರಿಗೆ) ಈ ಗದ್ದೆಯ ಉತ್ಪತ್ತಿಯ (ಮೇಲಿನ) ಪತ್ತೊಂದಿ ಎಂಬ ತೆರಿಗೆಯನ್ನು (ಮುಕ್ತಗೊಳಿಸಿ) ಬಿಟ್ಟನು.*

---

* ದಪ್ಪ ಅಕ್ಷರದ್ದು ಲೇಖಕನಿಂದ ಸೇರ್ಪಡೆಯಾದುದು. ಮತ್ತು ಉಳಿದ ಅನ್ವಯಾರ್ಥ ಶಾಸನ ಪಾಠವನ್ನು ಡಾ॥ ಎಂ. ಬಿ. ನೇಗಿನಹಾಳ ಅವರ ರಚನೆಯಂತೆಯೇ ಉಳಿಸಿಕೊಳ್ಳಲಾಗಿದೆ.



# ಪ್ರತಿಷ್ಠಾನ ವಾರ್ತೆ

### ವಿವಿಧ ಸ್ಥಳಗಳಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ

(ಹಿಂದಿನ ಸಂಚಿಕೆಯಿಂದ)

ಬಿಜಾಪುರ, ಸೊಲ್ಲಾಪುರ, ಬೀದರ್, ಗುಲಬರ್ಗ, ಸುರಪುರ, ರಾಯಚೂರು ಗಳಲ್ಲಿ ಸ್ಥಳೀಯ ಸಂಘ ಸಂಸ್ಥೆಗಳ ನೆರವಿನೊಂದಿಗೆ ಪ್ರತಿಷ್ಠಾನ ಶ್ರೀ ಶತಾಬ್ದಿ ಕಾರ್ಯ ಕ್ರಮಗಳನ್ನು ಏರ್ಪಡಿಸಿತು. ಪ್ರತಿಷ್ಠಾನದ ಪರವಾಗಿ ಬೆಂಗಳೂರಿನಿಂದ ಶ್ರೀಗಳಾದ ಜಿ. ನಾರಾಯಣ, ಪ್ರೊ॥ ಎಂ. ವಿ. ಸೀತಾರಾಮಯ್ಯ, ಡಾ॥ ಜಿ. ಎಸ್. ಶಿವರುದ್ರಪ್ಪ, ಪ್ರೊ॥ ಎಸ್. ಆರ್. ಮಳಗಿ ಮತ್ತು ನಾ. ಗೀತಾಚಾರ್ಯ ಅವರುಗಳು ಕಾರ್ಯಕ್ರಮ ದಲ್ಲಿ ಭಾಗವಹಿಸಿದ್ದರು. ಎಲ್ಲ ಕಡೆಯೂ ಕಾರ್ಯಕ್ರಮ ಬಹಳ ವ್ಯವಸ್ಥಿತವಾಗಿ ನಡೆ ಯಿತು. ಪ್ರತಿಷ್ಠಾನದ ಪ್ರಕಟನೆಗಳನ್ನು ಗಣನೀಯ ಸಂಖ್ಯೆಯಲ್ಲಿ ಅಭಿಮಾನಿಗಳು ಕೊಂಡು ಸಹಕರಿಸಿದರು.

**ಎಸ್. ಬಿ. ಆರ್ಟ್ಸ್ ಮತ್ತು ಕೆ. ಪಿ. ಸಿ. ಸೈನ್ಸ್ ಕಾಲೇಜ್, ವಿಜಾಪುರ :**

ದಿನಾಂಕ 27–7–84ರಂದು ಇಡೀ ದಿನ ಮೇಲ್ಕಂಡ ಕಾಲೇಜಿನಲ್ಲಿ, ಪ್ರತಿಷ್ಠಾನ ದೊಂದಿಗೆ ಕಾಲೇಜು, ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಮತ್ತು ಕಲಾ ಮಂಡಲಿಗಳು ಸೇರಿ ಕಾರ್ಯಕ್ರಮವನ್ನು ವ್ಯವಸ್ಥೆ ಮಾಡಿದ್ದವು. ನ್ಯೂ ಆರ್ಟ್ಸ್ ಕಾಲೇಜು ಪ್ರಾಚಾರ್ಯ ರಾದ ಎಸ್. ಎಸ್. ಕಬ್ಬಿಗ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು ; ಎಚ್. ಟಿ. ಸಾಸನೂರ ಅವರು ಅಧ್ಯಕ್ಷತೆ ವಹಿಸಿದ್ದರು.

ಮಧ್ಯಾಹ್ನದ ಗೋಷ್ಠಿ ಕಾರ್ಯಕ್ರಮದಲ್ಲಿ ನಮ್ಮ ಅತಿಥಿಗಳೊಂದಿಗೆ ಶಿಕ್ಷಣ ಕಾಲೇಜಿನ ಪಾಚಾರ್ಯರಾದ ಎನ್. ಜಿ. ಕರೂರ ಅವರೂ ಭಾಷಣ ಮಾಡಿದರು. ಶ್ರೀ ಮಹಂತ, ಗುಲಗಂಜಿ ಮತ್ತು ವೈ. ಎಚ್. ಕಲಾಲ್ ಅವರು ವಂದನಾರ್ಪಣೆ ಮಾಡಿದರು. ಬಿಜಾಪುರದಲ್ಲಿ ಕಾರ್ಯಕ್ರಮ ವ್ಯವಸ್ಥೆ ಮಾಡಿ ಯಶಸ್ವಿಯಾಗಿ ನಡೆಸಿ ಕೊಡುವಲ್ಲಿ ಸಹಕರಿಸಿದ ಶ್ರೀ ಸಂಗಮನಾಥ ಜಿ. ಹೆಂಡಿ ಅವರು ಅತಿಥಿಗಳ ಪರಿಚಯ ಮಾಡಿ ಸ್ವಾಗತಿಸಿದರು.

**ಬಸವ ಸಮಿತಿ, ಸೊಲ್ಲಾಪುರ :**

ಬೆಂಗಳೂರು ಕೇಂದ್ರ ಬಸವ ಸಮಿತಿಯ ಸೊಲ್ಲಾಪುರ ಶಾಖೆಯ ಅಧ್ಯಕ್ಷರಾದ ಶ್ರೀ ರಾಜಶೇಖರ ಮಡಕೆ ಅವರ ನೆರವಿನೊಂದಿಗೆ ಬಸವ ಸಮಿತಿ ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನಗಳು ಕೂಡಿ ವಿಕಾಸ್ ಹೋಟೆಲಿನ ಸಭಾಂಗಣದಲ್ಲಿ ಕಾರ್ಯಕ್ರಮ ನಡೆಸಿದವು. ನಮ್ಮ ಅತಿಥಿಗಳೊಂದಿಗೆ 'ಸಂಚಾರ್' ಪತ್ರಿಕೆಯ ಸಂಪಾದಕ ರಾದ ಕುಮಾರ ಕೋತಾವಳಿ, ಬಸವ ಸಮಿತಿ ಉಪಾಧ್ಯಕ್ಷರಾದ ಸುಧಾಕರ ಚೌಧರಿ,

ಮುಂತಾದವರು ಮಾತನಾಡಿದರು. ಕಾರ್ಯಕ್ರಮದಲ್ಲಿ ಶ್ರೀ ಸಿದ್ಧನಾಥ ಬಳ್ಳಾರಿ ಮತ್ತು ಅಲ್ಲಿಯ ಕನ್ನಡ ಸಂಘದ ಸದಸ್ಯರೂ ಪಾಲ್ಗೊಂಡಿದ್ದರು.

ಇಲ್ಲಿಂದ ಹೋಗಿದ್ದ ಅತಿಥಿಗಳ ಹೊರತು ಉಳಿದ ಕನ್ನಡಿಗರು ಕೂಡ ಮರಾಠಿ ಯಲ್ಲಿ ಮಾತನಾಡಿದರು. ಇದು ಅಲ್ಲಿಯ ಕನ್ನಡದ ಸ್ಥಿತಿ.

**ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಬೀದರ್ :**

ಕರ್ನಾಟಕದ ಶಿಖರಪ್ರಾಯವಾಗಿರುವ ಬೀದರ್ ಜಿಲ್ಲೆಯಲ್ಲಿ, ಅಲ್ಲಿಯ ಕ.ಸಾ.ಪ.ದೊಂದಿಗೆ ಪ್ರತಿಷ್ಠಾನವೂ ಸೇರಿ ಬಸವ ಮಂಟಪದಲ್ಲಿ ದಿನಾಂಕ 29-7-84ರಂದು ಕಾರ್ಯಕ್ರಮ ನಡೆಸಿತು. ಬೆಳಗಿನ ಕಾರ್ಯಕ್ರಮದಲ್ಲಿ ಖ್ಯಾತ ಜನಪದ ಸಾಹಿತಿ ಶ್ರೀ ಸಿಂಪಿಲಿಂಗಣ್ಣನವರು, ಸರ್ಕಾರಿ ಡಿಗ್ರಿ ಕಾಲೇಜಿನ ಅಧ್ಯಾಪಕರಾದ ಶ್ರೀ ಫಾಲಾಕ್ಷಯ್ಯ ಮತ್ತು ನಿವೃತ್ತ ಪ್ರಾಚಾರ್ಯರಾದ ಶ್ರೀ ಪಿ. ಎಂ. ಗಲಗಲಿ ಅವರು ಗಳು ಭಾಗವಹಿಸಿದ್ದರು. ವಿಧಾನಸಭಾ ಸದಸ್ಯರಾದ ಶ್ರೀ ನಾರಾಯಣರಾವ್ ಮಟ್ನಳ್ಳಿ ಅವರು ಅಧ್ಯಕ್ಷತೆ ವಹಿಸಿದ್ದರು.

ಮಧ್ಯಾಹ್ನ. ಜಿಲ್ಲೆಯ ಪ್ರಾತಿನಿಧಿಕ ಕವಿಗಳಿಂದ ಕವಿಗೋಷ್ಠಿಯನ್ನು ಏರ್ಪಡಿ ಸಿದ್ದುದು ಕಾರ್ಯಕ್ರಮದ ವೈಶಿಷ್ಟ್ಯವಾಗಿತ್ತು. ಜಿ. ಬಿ. ವಿಸಾಜಿ, ಎಂ. ಜಿ. ಗಂಗನ ಪಳ್ಳಿ. ವಸಂತ ಕಟ್ಟಿ. ಪ್ರಮೀಳ ಸಿರ್ಸಿ, ರಾಜಶ್ರೀ ಸಂಗಮ, ಮಾಣಿಕರಾವ್ ಧನಶ್ರಿ, ಬಸವರಾಜ ಸೈನಿಕ, ಬಸವರಾಜ ಪ್ರತಾಪ ಪುರೆ, ಯಶೋಧಮ್ಮ ಸಿದ್ಬಟ್ಟೆ, ಬಸವ ರಾಜ ಮಠಪತಿ, ಕಾಶಿನಾಥ ಅಂಬಲಗಿ, ಸಾಧನಾರಂಜೋಳ್ಕರ್, ಸಿಂಪಿ ಲಿಂಗಣ್ಣ ಅವರುಗಳು ಸ್ವರಚಿತ ಕವನ ವಾಚಿಸಿದರು. ಶ್ರೀ ಎ. ಎನ್. ಸಿಂಪಿ ಅವರು ಸ್ವಾಗತ ಮಾಡಿದರು. ಮತ್ತು ಶ್ರೀ ಎನ್. ಸೀತಾರಾಮಪ್ಪ ಅವರು ಸ್ವಾಗತ ಮತ್ತು ಪರಿಚಯ ಮಾಡಿದರು. ಶ್ರೀಮತಿ ವಿಶಾಲಾಕ್ಷಿ ತರಷ್ಠಿ ಮತ್ತು ವಿಜಯಶ್ರಿ ಸಿಪ್ನಾಳ್ ಅವರು ಶ್ರೀ ಗೀತೆಗಳನ್ನು ವಾಚನ ಮಾಡಿದರು. ಈ ಕಾರ್ಯಕ್ರಮದ ವ್ಯವಸ್ಥೆಗೆ ಸರ್ವವಿಧದಲ್ಲೂ ನೆರವಾದ ಶ್ರೀ ಎನ್. ಸೀತಾರಾಮಪ್ಪ ಮತ್ತು ಇತರರು ಅಭಿವಂದನೆಗೆ ಪಾತ್ರರು.

**ಕನ್ನಡ ಅಧ್ಯಯನ ವಿಭಾಗ, ಗುಲಬರ್ಗ ವಿಶ್ವವಿದ್ಯಾನಿಲಯ :**

ಗುಲಬರ್ಗ ವಿಶ್ವವಿದ್ಯಾನಿಲಯ, ಕರ್ನಾಟಕ ರಾಜ್ಯ ಸಾಹಿತ್ಯ ಅಕಡೆಮಿ ಮತ್ತು ಪ್ರತಿಷ್ಠಾನಗಳ ಸಂಯುಕ್ತಾಶ್ರಯದಲ್ಲಿ ಗುಲಬರ್ಗ ವಿಶ್ವವಿದ್ಯಾನಿಲಯದ ಕನ್ನಡ ವಿಭಾಗದಲ್ಲಿ 30-7-1984 ಮತ್ತು 31-7-1984ರಂದು ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮದ ಮುಖ್ಯ ವೈಶಿಷ್ಟ್ಯವೆಂದರೆ ಉತ್ತರಕರ್ನಾಟಕದ ಕವಿಗಳನ್ನೊಳ ಗೊಂಡ ರಾಜ್ಯಮಟ್ಟದ ಕವಿಗೋಷ್ಠಿ. ಈ ಗೋಷ್ಠಿಗೆ ಡಾ॥ ಹಾ. ಮಾ. ನಾಯಕರು ರಾಜ್ಯ ಸಾಹಿತ್ಯ ಅಕಾಡೆಮಿಯಿಂದ ಉದಾರವಾದ ಧನಸಹಾಯವನ್ನು ನೀಡಿದ್ದರು.

ಕಾರ್ಯಕ್ರಮವನ್ನು ಗುಲಬರ್ಗಾ ವಿಶ್ವವಿದ್ಯಾನಿಲಯದ ಉಪಕುಲಪತಿಗಳು, ಪ್ರತಿಷ್ಠಾನದ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕೇಂದ್ರ ಸಮಿತಿಯ ಸದಸ್ಯರೂ ಆದ ಡಾ॥ ಎಂ. ನಾಗರಾಜ್ ಅವರು ಉದ್ಘಾಟಿಸಿದರು. ಕನ್ನಡ ವಿಭಾಗದ ಮುಖ್ಯಸ್ಥರೂ, ಕಾರ್ಯಕ್ರಮದ ವ್ಯವಸ್ಥೆಗೆ ಸಹಕರಿಸಿದವರೂ ಆದ ಪ್ರೊ॥ ಬಿ. ಬಿ. ಹೆಂಡಿಯವರು ಅಧ್ಯಕ್ಷತೆ ವಹಿಸಿದ್ದರು.

'ಹೊಸಗನ್ನಡ ಕವಿತೆಗೆ ಶ್ರೀಯವರು ಹಾಕಿದ ಅಸ್ತಿಭಾರ'ವನ್ನು ಕುರಿತು ಪ್ರೊ॥ ಎಸ್. ಆರ್. ಮಳಗಿ ಅವರೂ, 'ಬಿ.ಎಂ.ಶ್ರೀ. ಸಾಹಿತ್ಯ ವಿಮರ್ಶೆಯನ್ನು' ಕುರಿತು ಪ್ರೊ॥ ವಸಂತ ಕುಷ್ಟಗಿ ಅವರೂ, 'ನವೋದಯ ನಾಯಕರಾಗಿ ಬಿ.ಎಂ.ಶ್ರೀ.' ಯನ್ನು ಕುರಿತು ಡಾ॥ ಎಂ. ಜಿ. ಬಿರಾದಾರ ಅವರೂ ೧ನೇ ಗೋಷ್ಠಿಯಲ್ಲಿ ತಮ್ಮ ಪ್ರಬಂಧಗಳನ್ನು ಮಂಡಿಸಿದರು. ಡಾ॥ ಜಿ. ಎಸ್. ಶಿವರುದ್ರಪ್ಪ ಅವರು ಅಧ್ಯಕ್ಷ ರಾಗಿದ್ದರು. ಡಾ॥ ಕೆ. ಎ. ಕಿತ್ತೂರ ಅವರು ಸ್ವಾಗತ ಪರಿಚಯ ಮಾಡಿದರು.

೨ನೇ ಗೋಷ್ಠಿಯಲ್ಲಿ ಗೋಷ್ಠಿಯ ಅಧ್ಯಕ್ಷರೂ ಆದ ಪ್ರೊ॥ ಎಂ.ವಿ.ಸೀ. ಅವರು 'ನವೋದಯ ಕಾಲದ ಛಂದೋರೂಪಗಳನ್ನು' ಕುರಿತು, ಪ್ರೊ॥ ಬಿ. ಆರ್. ಸುರಪುರ ಅವರು 'ಬಿ.ಎಂ.ಶ್ರೀ. ಪೂರ್ವದ ಹೊಸಗನ್ನಡ ಸಾಹಿತ್ಯ'ವನ್ನು ಕುರಿತೂ, ಡಾ॥ ಶಶಿಕಲಾ ಮೋಕ್ದಿ ಅವರು 'ಬಿ.ಎಂ.ಶ್ರೀ ರಚಿತ ನಾಟಕಗಳನ್ನು' ಕುರಿತೂ ಮಾತ ನಾಡಿದರು. ಡಾ॥ ವಿ. ಜಿ. ಪೂಜಾರ ಅವರು ಸ್ವಾಗತ, ಪರಿಚಯ ಮಾಡಿದರು.

31–7–84ರಂದು ಹೈದರಾಬಾದ್ ಕರ್ನಾಟಕ ಪ್ರಾಂತ್ಯದ ಕವಿಗಳನ್ನೊಳ ಗೊಂಡ ಕವಿಗೋಷ್ಠಿಯನ್ನು ಡಾ॥ ಜಿ. ಎಸ್, ಎಸ್. ಅವರ ಅಧ್ಯಕ್ಷತೆಯಲ್ಲಿ ನಡೆಸ ಲಾಯಿತು. ಡಾ॥ ಶೈಲಜಾ ಉಡಚಣ, ಪಶುಪತಿ ರೆಡ್ಡಿ, ಪ್ರಭುರಾಜ ಅರಣಕಲ್, ಬಸವರಾಜ ಸರಬದ, ಕೆ. ಎಸ್. ರಾಜ, ಶಾಂತರಸ, ಶಿವಶರಣ ಪಾಟೀಲ, ಕಿಶನ್ ರಾವ್, ಸರಸ್ವತಿ ಚಿಮ್ಮಲಗಿ, ಸೂಗಯ್ಯ ಹಿರೇಮಠ, ಎ. ಕೃಷ್ಣ, ಸುವರ್ಣಚಿತಾ ಪೂರಿ ಮತ್ತು ನಾ. ಗೀತಾಚಾರ್ಯ ಅವರುಗಳು ಕವಿತೆಗಳನ್ನು ಓದಿದರು. ಡಾ॥ ಎಸ್. ಡಿ. ಸವದತ್ತಿ ಮಠ ಅವರು ಸ್ವಾಗತ ಪರಿಚಯ ಮಾಡಿಕೊಟ್ಟರು.

ಸಂಜೆ ನಡೆದ ಸಮಾರೋಪ ಸಮಾರಂಭದಲ್ಲಿ ಜಿ. ನಾರಾಯಣ ಅವರು ಮುಖ್ಯ ಅತಿಥಿಗಳಾಗಿ, ಬಿ. ಬಿ. ಹೆಂಡಿ ಅವರು ಅಧ್ಯಕ್ಷರಾಗಿ ಭಾಗವಹಿಸಿದ್ದರು. ಎಲ್ಲ ಕಾರ್ಯಕ್ರಮಗಳನ್ನು ಡಾ॥ ಮಲ್ಲಿಕಾರ್ಜುನ ಶಿ. ಲಠ್ಠೆ ಅವರು ವ್ಯವಸ್ಥಿತವಾಗಿ ನಿರ್ವಹಿಸಿಕೊಟ್ಟರು.

**ನೂತನ ವಿದ್ಯಾಲಯ ಸಂಸ್ಥೆ, ಗುಲಬರ್ಗಾ :**

31–7–84ರ ಬೆಳಗ್ಗೆ ಮೇಲ್ಕಂಡ ಸಂಸ್ಥೆಯ ಸಭಾಂಗಣದಲ್ಲಿ, ಎಸ್. ವಿ. ಕಾಲೇಜು, ಕನ್ನಡ ಸಾಹಿತ್ಯ ಸಂಘ, ಮಹಾರಾಷ್ಟ್ರ ಸಾಹಿತ್ಯ ಮಂಡಲಿ ಮತ್ತು ಪ್ರತಿಷ್ಠಾನಗಳು ಸೇರಿ 'ಶ್ರೀ' ಕಾರ್ಯಕ್ರಮವನ್ನು ವ್ಯವಸ್ಥೆ ಮಾಡಿದ್ದವು. ಸಂಸ್ಥೆಯ

ಅಧ್ಯಕ್ಷರಾದ ಶ್ರೀ ಜಗನ್ನಾಥರಾವ್ ಜಂಡರಕಿ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ನಮ್ಮ ಅತಿಥಿಗಳು ಶ್ರೀಯವರನ್ನು ಕುರಿತು ಮಾತನಾಡಿದರು. ಸಂಸ್ಥೆಯ ಪ್ರಾಚಾರ್ಯರಾದ ಪ್ರೊ॥ ವಿ. ಪಿ. ದೇವಳಗಾಂವಕರ್ ಅವರು ಸ್ವಾಗತ ಕೋರಿದರು. ಉಪನ್ಯಾಸಕರಾದ ಶ್ರೀ ಜಗತಿ ಅವರು ಪರಿಚಯಮಾಡಿದರು. ಪ್ರತಿಷ್ಠಾನದ ಆಜೀವ ಸದಸ್ಯರಾದ ಎಂ.ಎಸ್.ಸಿ. ಡಿಗ್ರಿ ಕಾಲೇಜಿನ ಪ್ರಾಚಾರ್ಯರಾದ ಪ್ರೊ॥ ವಸಂತ ಕುಷ್ಟಗಿ ಅವರು ಈ ಕಾರ್ಯಕ್ರಮದ ವ್ಯವಸ್ಥೆಯಲ್ಲಿ ನೆರವಾಗಿದ್ದರು.

**ವಿ. ಜಿ. ವುಮೆನ್ಸ್ ಕಾಲೇಜ್, ಗುಲಬರ್ಗ :**

31–7–84ರಂದು ಮಧ್ಯಾಹ್ನ 12 ಗಂಟೆಗೆ ಕಾಲೇಜಿನ ಸಭಾಂಗಣದಲ್ಲಿ ಕಾಲೇಜು ಮತ್ತು ಪ್ರತಿಷ್ಠಾನಗಳ ಸಂಯುಕ್ತಾಶ್ರಯದಲ್ಲಿ ಕಾರ್ಯಕ್ರಮ ನಡೆಯಿತು. ಕಾಲೇಜಿನ ಪ್ರಾಚಾರ್ಯರು ಅಧ್ಯಕ್ಷತೆ ವಹಿಸಿದ್ದರು. ಅಧ್ಯಾಪಕರು ಸ್ವಾಗತ, ಪರಿಚಯ ಮಾಡಿದರು.

ಗುಲಬರ್ಗದಲ್ಲಿ ಅತಿಥಿಗಳು ಬಿಡುವಿಲ್ಲದ ರೀತಿಯಲ್ಲಿ ಕಾರ್ಯಕ್ರಮವನ್ನು ಹೊಂದಿದ್ದರು. ಬೆಂಗಳೂರಿನಿಂದ ಬಂದ ಅತಿಥಿಗಳನ್ನು ಗುಲಬರ್ಗ ಅಭಿಮಾನಿಗಳು, ಪತ್ರಿಕೆಗಳು ಮತ್ತು ಆಕಾಶವಾಣಿಗಳು ಅನೇಕ ವಿಧವಾಗಿ ಬಳಸಿಕೊಂಡು ಕನ್ನಡ ಜನತೆಯ ಕೃತಜ್ಞತೆಗೆ ಪಾತ್ರರಾಗಿದ್ದರು. ಗುಲಬರ್ಗದಿಂದ ನಾವು ಹೊರಡುವಾಗ ದಾರಿಯಲ್ಲಿ ಶ್ರೀ ಎಂ. ಆರ್. ಬಿದ್ರಿಮಂತಶೆಟ್ಟಿ ಅವರು ಆದರದಿಂದ ಕಂಡು, ರಂಗಂ ಪೇಟೆಯ ಕನ್ನಡ ಸಂಘದ ಕಾರ್ಯಚಟುವಟಿಕೆಗಳನ್ನು ಪರಿಚಯಿಸಿಕೊಟ್ಟು ಸತ್ಕರಿಸಿದರು.

**ಪ್ರಭು ಡಿಗ್ರಿ ಕಾಲೇಜು, ಸುರಪುರ :**

ಲಕ್ಷ್ಮೀಶನ ಜನ್ಮಸ್ಥಳವಾದ ಸುರಪುರದಲ್ಲಿ ಇನ್ನೊಬ್ಬ ಕನ್ನಡ ಖ್ಯಾತ ಕವಿಯ ಜನ್ಮಶತಮಾನೋತ್ಸವವನ್ನು ಆಚರಿಸಿದ ಕೀರ್ತಿ ಅಲ್ಲಿಯ ಕಾಲೇಜಿನವರದು. ಕಾಲೇಜಿನ ಸಂಸ್ಥಾಪಕ ದಿನಾಚರಣೆಯ ಸಂದರ್ಭದಲ್ಲಿ ಅದೇ ವೇದಿಕೆಯಲ್ಲಿ, ದಿನಾಂಕ 1–8–1984ರಂದು ಬೆಳಗ್ಗೆ ಬಿ.ಎಂ.ಶ್ರೀ.ಯವರ ನೆನಪನ್ನು ಹಂಚಿಕೊಂಡದ್ದು ಇಲ್ಲಿಯ ವೈಶಿಷ್ಟ್ಯ. ಶಾಸಕರಾದ ಶ್ರೀ ಹನುಮಂತರಾವ್ ದೇಸಾಯಿ ಅವರು ಅಧ್ಯಕ್ಷತೆ ವಹಿಸಿದ್ದ ಈ ಸಮಾರಂಭದಲ್ಲಿ ಬೆಂಗಳೂರಿನ ಅತಿಥಿಗಳು ಶ್ರೀಯವರನ್ನು ಪರಿಚಯಿಸಿಕೊಟ್ಟರು. ಕಾಲೇಜಿನ ಪ್ರಿನ್ಸಿಪಾಲರಾದ ಶ್ರೀ ಕೆ. ವಿಶ್ವನಾಥ್ ಅವರು ಸ್ವಾಗತಿಸಿದರು. ಅಧ್ಯಾಪಕರೊಬ್ಬರು ವಂದನಾರ್ಪಣೆ ಮಾಡಿದರು.

**ಕರ್ನಾಟಕ ಸಂಘ, ರಾಯಚೂರು :**

ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಕರ್ನಾಟಕ ಸಂಘ ರಾಯಚೂರು ಮತ್ತು ಬಿ.ಎಂ.ಶ್ರೀ. ಪ್ರತಿಷ್ಠಾನಗಳ ಸಂಯುಕ್ತಾಶ್ರಯದಲ್ಲಿ ಸಂಘದ ಸಭಾಂಗಣ

ದಲ್ಲಿ ದಿನಾಂಕ 1-8-84ರಂದು ಸಂಜೆ ಶ್ರೀಯವರ ಜನ್ಮಶತಮಾನೋತ್ಸವ ಕಾರ್ಯ ಕ್ರಮ ನಡೆಯಿತು.

ಜಿಲ್ಲಾಧಿಕಾರಿಗಳಾದ ಶ್ರೀ ಎಲ್. ಬಿ. ಮನಿಕಟ್ಟಿ ಅವರು ಉದ್ಘಾಟಿಸಿದ ಈ ಕಾರ್ಯಕ್ರಮ ಎಂ.ವಿ.ಸೀ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಈ ಕಾರ್ಯಕ್ರಮದ ಏರ್ಪಾಡಿಗೆ ನಮ್ಮೊಂದಿಗೆ ಸಕ್ರಿಯವಾಗಿ ಸಹಕರಿಸಿದ ಶ್ರೀ ಜಯತೀರ್ಥರಾಜ ಪುರೋಹಿತ ಅವರು ಸ್ವಾಗತಭಾಷಣ ಮಾಡಿದರು. ಶ್ರೀ ಅಯ್ಯಪ್ಪ ತಕ್ಕಾಯಿ ಅವರು ನಿರ್ದೇಶಿಸಿದರು. ಇ. ಜಿ. ಕಿಶನ್‌ರಾವ್ ವಂದಿಸಿದರು. ಕಲಾಪರಿಷತ್ತಿನ ಅಧ್ಯಕ್ಷ ರಾದ ಶ್ರೀ ಆಂಜನೇಯಲು ಅವರೂ ಕಾರ್ಯಕ್ರಮದಲ್ಲಿ ಉಪಸ್ಥಿತರಿದ್ದರು, ಸಂಘದ ಕಾರ್ಯದರ್ಶಿ ಎಚ್. ಪಂಪಯ್ಯ ಶೆಟ್ಟಿ ಅವರೂ ಈ ಕಾರ್ಯಕ್ರಮದ ವ್ಯವಸ್ಥೆಗಾಗಿ ನೆರವಾಗಿದ್ದಾರೆ.

**ಬಬ್ಬೂರು ಕಮ್ಮೆ ಸೇವಾ ಸಮಿತಿ, ಬೆಂಗಳೂರು :**

ತಮ್ಮ ಜನಾಂಗದವರೇ ಆದ ಆಚಾರ್ಯಪುರುಷರನ್ನು ಹೆಮ್ಮೆಯಿಂದ ಸ್ಮರಿಸಿ ಕೊಂಡು, ಸಮಿತಿಯವರು ಜನಾಂಗಿಕ ಗೌರವವನ್ನು ಸಲ್ಲಿಸಿದರು. ಪ್ರತಿಷ್ಠಾನದ ಸಹಕಾರದೊಂದಿಗೆ 15-8-84ರಂದು ಸಮಿತಿಯ ಸಭಾಂಗಣದಲ್ಲಿ ನಡೆದ ಉತ್ಸವದಲ್ಲಿ ಸಮಿತಿಯ ಅಧ್ಯಕ್ಷರಾದ ಎಚ್. ಕೆ. ಕುಮಾರಸ್ವಾಮಿ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ॥ ಎಂ.ವಿ.ಸೀ., ಶ್ರೀ ನಾಗಭೂಷಣ, ಈಸ್ಟರ್ನ್ ಪ್ರೆಸ್ ಮಾಲೀಕರಾದ ಶ್ರೀ ಎಂ. ಎಸ್. ಚಿಂತಾಮಣಿ ಅವರುಗಳು ಭಾಷಣಕಾರರಾಗಿ, ಶ್ರೀ ಜಿ. ನಾರಾಯಣ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಶ್ರೀ ವೆಂಕಟರಾಮಯ್ಯ ಅವರು ಸ್ವಾಗತಿಸಿ ದರು. ಸಮಿತಿಯ ಕಾರ್ಯದರ್ಶಿ ಶ್ರೀ ಪಿ. ಎಸ್. ಸುಬ್ಬರಾವ್ ಅವರು ವಂದನಾರ್ಪಣೆ ಮಾಡಿದರು.

ಶ್ರೀಯವರ ಸ್ವಮತಸ್ಥರಲ್ಲಿ ಶ್ರೀ ಪ್ರತಿಷ್ಠಾನ ಒಂದು ಕಳಕಳಿಯ ಮನವಿ ಮಾಡಿಕೊಂಡಿತ್ತು. ಶ್ರೀ ಉತ್ಸವ ನೆನಪಿನ ಶ್ರೀ ಭವನದ ನಿಧಿಗೆ ಹೆಚ್ಚಿನ ಪ್ರಮಾಣ ದಲ್ಲಿ ಕಾಣಿಕೆ ಸಲ್ಲಿಸಿ ಮತೀಯ ಪ್ರೇಮವನ್ನು ಅಭಿಮಾನವನ್ನು ಉಳಿದವರಿಗೆ ಮಾದರಿಯಾಗಿಸಬೇಕೆಂದೂ, ಹೆಚ್ಚಿನ ಹಣವನ್ನು ದಾನವಾಗಿ ನೀಡಿದವರ ಹೆಸರನ್ನು ಭವನದಲ್ಲಿ ಶಿಲಾಫಲಕದಲ್ಲಿ ಸ್ಮರಿಸಲಾಗುವುದೆಂದೂ, ಈಗಾಗಲೇ ಶ್ರೀ ಎನ್. ಡಿ. ಎನ್. ರಾವ್ ಮತ್ತು ಇತರರು ದಾನ ನೀಡಿದ್ದಾರೆಂದು ಆ ಮನವಿಯಲ್ಲಿ ಸೂಚಿಸಿತ್ತು. ಆದರೆ ಕೇವಲ ಸಾವಿರ ರೂ. ಮಾತ್ರ ಸಂಗ್ರಹವಾಯಿತು. ಜೊತೆಗೆ ಸದಸ್ಯರೂ ಕಾರ್ಯಕ್ರಮದಲ್ಲಿ ಹೆಚ್ಚಿನ ಸಂಖ್ಯೆಯಲ್ಲಿ ಭಾಗವಹಿಸಲಿಲ್ಲ.

**ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು, ಶೃಂಗೇರಿ :**

ಪ್ರತಿನಿಧಿ ಶ್ರೀ ಡಿ. ರಾಜಣ್ಣ ಅವರ ಸಹಕಾರದಿಂದ ಪರಿಷತ್ತಿನ ತಾಲೂಕು ಶಾಖೆ ಮತ್ತು ಪ್ರತಿಷ್ಠಾನಗಳ ಸಂಯುಕ್ತಾಶ್ರಯದಲ್ಲಿ ಶೃಂಗೇರಿಯ ಬಾಲಕಿಯರ

ಪ್ರೌಢಶಾಲೆಯಲ್ಲಿ ದಿನಾಂಕ 26–8–84ರಂದು ಶ್ರೀ ಜನ್ಮಶತಮಾನೋತ್ಸವ ಹಾಗೂ ವಸಂತ ಸಾಹಿತ್ಯೋತ್ಸವ ನಡೆಯಿತು. ಸಂಪಾದಕರಾದ ಶ್ರೀ ಎನ್. ಎಸ್. ಚಂದ್ರಶೇಖರ್ ಅವರು ಅಧ್ಯಕ್ಷತೆ ವಹಿಸಿದ್ದರು. ಜೆ. ಸಿ. ಬಿ. ಎಂ. ಕಾಲೇಜಿನ ಅಧ್ಯಾಪಕರುಗಳಾದ ಶ್ರೀ ಎಚ್. ಎಲ್. ಸುಬ್ರಹ್ಮಣ್ಯ ಹಾಗೂ ಕೆ. ಗಣಪತಿಭಟ್ ಅವರುಗಳು ಭಾಷಣ ಮಾಡಿದರು. ಶ್ರೀ ದ. ರಾಜಣ್ಣ ಸ್ವಾಗತ ಮಾಡಿದರು. ಶ್ರೀ ಲಕ್ಷ್ಮಣದಾಸ್ ಅವರು ವಂದನಾರ್ಪಣೆ ಮಾಡಿದರು. ಹಿಂದಿನ ದಿನದ ಬಂದ್ ಕಾರಣದಿಂದ ಬೆಂಗಳೂರಿನಿಂದ ಹೋಗಬೇಕಿದ್ದ ಶ್ರೀ ಹೀ. ಚಿ. ಶಾಂತವೀರಯ್ಯ ಹಾಗೂ ನಾ. ಗೀತಾಚಾರ್ಯ ಅವರು ಕಾರ್ಯಕ್ರಮದಲ್ಲಿ ಭಾಗವಹಿಸಲಾಗಲಿಲ್ಲ.

**ಕೊಡಗು ಜಿಲ್ಲೆಯಲ್ಲಿ ಬಿ.ಎಂ.ಶ್ರೀ. ಕಾರ್ಯಕ್ರಮಗಳು : ಸರ್ವೋದಯ ಶಿಕ್ಷಣ ವಿದ್ಯಾಲಯ, ವಿರಾಜಪೇಟೆ : ಕೊಡಗು ಜಿಲ್ಲಾ ಸಹಕಾರಿ ತರಬೇತಿ ಕೇಂದ್ರ, ಮಡಕೇರಿ :**

ದಿನಾಂಕ 21–9–84ರಂದು ಸಂಜೆ ವಿರಾಜಪೇಟೆಯಲ್ಲಿ. 22–9–84ರಂದು ಬೆಳಗ್ಗೆ ಮಡಕೇರಿಯಲ್ಲಿ ಸಂಸ್ಥೆಗಳ ಸಭಾಂಗಣದಲ್ಲಿ ಪ್ರತಿಷ್ಠಾನ ಮತ್ತು ಕೊಡಗು ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು ಹಾಗೂ ಸಂಸ್ಥೆಗಳ ಸಂಯುಕ್ತಾಶ್ರಯದಲ್ಲಿ ಬಿ.ಎಂ.ಶ್ರೀ. ಕಾರ್ಯಕ್ರಮಗಳು ನಡೆದವು.

ಬೆಂಗಳೂರಿನಿಂದ ಆಗಮಿಸಿದ್ದ ಪ್ರಸಿದ್ಧ ಸಾಹಿತಿಗಳಾದ ಪ್ರೊ। ಎಲ್. ಎಸ್. ಶೇಷಗಿರಿರಾವ್. ಡಾ॥ ರಾಮಚಂದ್ರ ಶರ್ಮ ಅವರುಗಳೂ. ಪ್ರತಿಷ್ಠಾನದಿಂದ ಪ್ರೊ॥ ಎಂ. ವಿ. ಸೀತಾರಾಮಯ್ಯ ಮತ್ತು ನಾ. ಗೀತಾಚಾರ್ಯ ಅವರುಗಳೂ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

ಈ ಎರಡೂ ಕಾರ್ಯಕ್ರಮಗಳ ವ್ಯವಸ್ಥೆಯಲ್ಲಿ ಪ್ರತಿಷ್ಠಾನದೊಂದಿಗೆ ಸಹಕರಿಸಿದ ಜಿಲ್ಲಾ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಡಿ. ಜೆ. ಪದ್ಮನಾಭ ಅವರು ಅತಿಥಿಗಳ ಪರಿಚಯ ಮಾಡಿಕೊಟ್ಟರು. ವಿರಾಜಪೇಟೆ ಕಾರ್ಯಕ್ರಮದಲ್ಲಿ ಸಂಸ್ಥೆಯ ಪ್ರಾಂಶುಪಾಲರಾದ ಶ್ರೀ. ಬಿ. ಆರ್. ಶರತ್‌ಚಂದ್ರ ಅವರು ಸ್ವಾಗತಿಸಿದರು. ಸಂಸ್ಥೆಯ ಸಂಸ್ಥಾಪಕರಾದ ಪ್ರೊ॥ ಬಿ. ವಿ. ರಮಣ ಅವರು ಅಧ್ಯಕ್ಷತೆ ವಹಿಸಿದ್ದರು. ಶ್ರೀ ಟಿ. ಕೇಶವಭಟ್ಟ ಅವರು ಮುಖ್ಯ ಅತಿಥಿಗಳಾಗಿದ್ದರು. ಶ್ರೀಮತಿ ಶಶಿಕಲಾ ವಿಜಯಚಂದ್ರ ಅವರು ವಂದನಾರ್ಪಣೆ ಮಾಡಿದರು. ಶ್ರೀ ಕೆ. ಸಿ. ಅಪ್ಪಣ್ಣ ಅವರು ಶುಭಾಶಯಗಳನ್ನು ಓದಿದರು. ಸಂಸ್ಥೆಯ ವಿದ್ಯಾರ್ಥಿ – ವಿದ್ಯಾರ್ಥಿನಿಯರಿಂದ ಶ್ರೀಯವರ ಹಾಡುಗಳ ಗಾಯನ. ನೃತ್ಯ, ರೂಪಕಗಳಿಂದ ಕಾರ್ಯಕ್ರಮ ಮೆರಗು ಕಟ್ಟಿತ್ತು.

ಮಡಕೇರಿ ಕಾರ್ಯಕ್ರಮ ತರಬೇತಿ ಕೇಂದ್ರದ ಪ್ರಾಂಶುಪಾಲರಾದ ಶ್ರೀ ಎಚ್. ಎಂ. ಅಣ್ಣಪ್ಪ ಅವರ ಅಧ್ಯಕ್ಷತೆಯಲ್ಲಿ ನಡೆಯಿತು. ಅಧ್ಯಾಪಕರು ವಂದನಾರ್ಪಣೆ ಮಾಡಿದರು.

## ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ಬಿ.ಎಂ.ಶ್ರೀ. ಕಾರ್ಯಕ್ರಮಗಳು

**ಎಂ.ಜಿ.ಎಂ. ಕಾಲೇಜು, ಉಡುಪಿ.**

ದಿನಾಂಕ 22-9-84ರಂದು ಸಂಜೆ ಪ್ರತಿಷ್ಠಾನ ಮತ್ತು ಮಹಾತ್ಮಾಗಾಂಧಿ ಮೆಮೋರಿಯಲ್ ಕಾಲೇಜುಗಳ ಆಶ್ರಯದಲ್ಲಿ ಕಾಲೇಜಿನ ಸಭಾಂಗಣದಲ್ಲಿ ಕಾರ್ಯಕ್ರಮ ನಡೆಯಿತು.

ಮಡಕೇರಿ ಕಾರ್ಯಕ್ರಮ ಮುಗಿಸಿಕೊಂಡು ಬೆಂಗಳೂರಿನ ಅತಿಥಿಗಳು ಬಹಳ ತಡವಾಗಿ ಬಂದರೂ ಉಡುಪಿಯ ಅಭಿಮಾನಿಗಳು ತಾಳ್ಮೆಯಿಂದ ಕಾಯುತ್ತಿದ್ದರು. ಶ್ರೀಯವರನ್ನು ಕುರಿತ ವಿದ್ವಾಂಸರ ಭಾಷಣಗಳಿಂದ (ಡಾ॥ ಶರ್ಮ, ಪ್ರೊ॥ ಎಲ್. ಎಸ್. ಎಸ್., ಪ್ರೊ॥ ಎಂ.ವಿ.ಸೀ) ತಡವಾದರೂ ಕದಲದೆ ಉತ್ಸುಕರಾಗಿದ್ದುದು ಈ ಕಾರ್ಯಕ್ರಮದ ವೈಶಿಷ್ಟ್ಯವಾಗಿತ್ತು.

ಪ್ರೊ॥ ರಾಜಗೋಪಾಲಚಾರ್ಯ ಅವರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಕಾಲೇಜಿನ ಪ್ರಾಚಾರ್ಯರಾದ ಪ್ರೊ॥ ಕೆ. ಕೆ. ಈಶ್ವರನ್ ಅವರು ಸ್ವಾಗತ ಕೋರಿದರು. ಡಾ॥ ಪಿ. ರಾಮಭಟ್ ಅವರು ಅತಿಥಿಗಳ ಪರಿಚಯ ಮಾಡಿಕೊಟ್ಟರು. ಹೊಸ್ಕೆರೆ ಶಿವಸ್ವಾಮಿ ಅವರು ವಂದನಾರ್ಪಣೆ ಮಾಡಿ ಶ್ರೀಯವರನ್ನು ಕುರಿತ ಒಂದು ಪದ್ಯವನ್ನು ಓದಿದರು. ಶ್ರೀ ಡಿ. ಆರ್. ಪಾಂಡುರಂಗ ಅವರು ಕಾರ್ಯಕ್ರಮವನ್ನು ನಿರ್ವಹಿಸಿದರು.

ತರಂಗ ಪತ್ರಿಕೆಯ ಸಂಪಾದಕರಾದ ಶ್ರೀ ಸಂತೋಷಕುಮಾರ ಗುಲ್ವಾಡಿ ಅವರು ಕಾರ್ಯಕ್ರಮಕ್ಕೆ ಆಗಮಿಸಿ ಅತಿಥಿಗಳನ್ನು ಆನಂತರ ಪತ್ರಿಕೆಯ ಪ್ರೆಸ್‌ಗೆ ಕರೆದೊಯ್ದು ಪರಿಚಯಿಸಿದರು. ನಂತರ ಉಡುಪಿಯ ಶ್ರೀ ಶ್ರೀಗಳ ಆತಿಥ್ಯದಲ್ಲಿ ಅತಿಥಿಗಳು ಆ ದಿವಸ ಉಡುಪಿಯಲ್ಲಿದ್ದರು.

ಕಾಲೇಜಿನ ಅತ್ಯಾಧುನಿಕೀಕರಣಗೊಂಡಿರುವ ಜಾನಪದ ವಿಭಾಗಕ್ಕೂ ತುಳು ನಿಘಂಟು ವಿಭಾಗಕ್ಕೂ ಗೋವಿಂದ ಪೈ ಸ್ಮಾರಕ ಸಂಶೋಧನ ಕೇಂದ್ರಕ್ಕೂ ಅತಿಥಿಗಳು ಭೇಟಿ ನೀಡಿದ್ದರು.

**ದಕ್ಷಿಣಕನ್ನಡ ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು, ಮಂಗಳೂರು.**

ಮಂಗಳೂರಿನಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ನಡೆಸಲು ಪರಿಷತ್ತು ವಿಶೇಷ ವ್ಯವಸ್ಥೆಯನ್ನು ಮಾಡಿತ್ತು. ಎಂ. ಎನ್. ಕಾಮತ್ ಮತ್ತು ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸ್ವಾಗತ ಸಮಿತಿ'ಯನ್ನು ಶ್ರೀ ಕುಲ್ಯಾಡಿ ಮಾಧವ ಪೈ ಅವರ ಅಧ್ಯಕ್ಷತೆಯಲ್ಲಿ ರಚಿಸಿತ್ತು. ಕಾರ್ಯಕ್ರಮದ ವ್ಯವಸ್ಥೆಗೆ ಪ್ರತಿಷ್ಠಾನಕ್ಕೆ ವಿಶೇಷವಾಗಿ ನೆರವಾದ ಪರಿಷತ್ತಿನ ಅಧ್ಯಕ್ಷರಾದ ಶ್ರೀ ಕೀಕಾನ ರಾಮಚಂದ್ರ ಅವರು ಕಾರ್ಯಾಧ್ಯಕ್ಷರಾಗಿಯೂ, ಶ್ರೀ ಪಿ. ಜಯರಾಮಶೆಟ್ಟಿ ಅವರು ಕೋಶಾಧ್ಯಕ್ಷರಾಗಿಯೂ ಇದ್ದುದಲ್ಲದೆ ಜಿಲ್ಲೆಯ ಎಲ್ಲ ಗಣ್ಯರನ್ನು ಒಳ



ಗೊಂಡಂತೆ ಉಪಾಧ್ಯಕ್ಷರು ಮತ್ತು ಸದಸ್ಯರುಗಳು ಇದ್ದರು. ಶ್ರೀ ವಾಮನ ನಂದಾವರ, ಶ್ರೀ [illegible]ಶೆಟ್ಟಿ ಮತ್ತು ಕುಮಾರಿ ಮನೋಹರಿ ಅವರು ಕಾರ್ಯದರ್ಶಿಗಳಾಗಿದ್ದರು.

ದಿನಾಂಕ 22-9-1984ರಂದು ಸ್ವಾಗತ ಸಮಿತಿ ಡಾ॥ ಶಿವರಾಮ ಕಾರಂತ ಅವರ ಅಧ್ಯಕ್ಷತೆಯಲ್ಲಿ ಮಂಗಳೂರಿನ ಪುರಭವನದಲ್ಲಿ ಎಂ. ಎನ್. ಕಾಮತ್ (17-3-1983–24-4-1990) ಅವರ ಜನ್ಮಶತಮಾನೋತ್ಸವವನ್ನು ಆಚರಿಸಿತು.

23-9-1984ರಂದು ಅದೇ ಸಭಾಂಗಣದಲ್ಲಿ ಇಡೀ ದಿವಸ ಸ್ವಾಗತ ಸಮಿತಿ ಮತ್ತು ಪ್ರತಿಷ್ಠಾನಗಳ ಸಂಯುಕ್ತಾಶ್ರಯದಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮ ನಡೆಯಿತು.

ಬೆಳಗ್ಗೆ 10 ಗಂಟೆಗೆ ಶ್ರೀ ಕಯ್ಯಾರ ಕಿಞ್ಞಣ್ಣರೈ ಅವರ ಅಧ್ಯಕ್ಷತೆಯಲ್ಲಿ ಪ್ರೊ॥ ಎಂ. ರಾಜಗೋಪಾಲಾಚಾರ್ಯ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಸ್ವಾಗತ ಸಮಿತಿಯ ಅಧ್ಯಕ್ಷರಾದ ಶ್ರೀ ಕಲ್ಯಾಡಿ ಮಾಧವ ಪೈ ಅವರು ಅತಿಥಿಗಳನ್ನು ಸ್ವಾಗತಿಸಿದರೆ ಶ್ರೀ ನಾ. ಉಜಿರೆ ಅವರು ವಂದನಾರ್ಪಣೆ ಮಾಡಿದರು.

ಅನಂತರ ವಿವಿಧ ಗೋಷ್ಠಿಗಳು ಆರಂಭವಾದವು. 11 ಗಂಟೆಗೆ ಡಾ॥ ಬಿ.ಎ. ವಿವೇಕ ರೈ ಅವರ ಅಧ್ಯಕ್ಷತೆಯಲ್ಲಿ ಶ್ರೀಯವರು ಹಾಗೂ ಕನ್ನಡದ ಬಗ್ಗೆ ಪ್ರೊ॥ ಎಂ.ವಿ.ಸೀ. ಅವರೂ, ಶ್ರೀಯವರ ಹೊಂಗನಸುಗಳನ್ನು ಕುರಿತು ಶ್ರೀ ಅಮೃತ ಸೋಮೇಶ್ವರ ಅವರೂ ಮಾತನಾಡಿದರು. ಗೋಷ್ಠಿಯನ್ನು ಶ್ರೀ ಎ. ವಿ. ನಾವಡ ಅವರು ನಿರ್ದೇಶಿಸಿದ್ದರು. ಕುಮಾರಿ ಪಿ. ಮನೋಹರಿ ವಂದನಾರ್ಪಣೆ ಮಾಡಿದರು.

ನಂತರ ಮಧ್ಯಾಹ್ನ 3 ಘಂಟೆಗೆ ಎರಡನೇ ಗೋಷ್ಠಿಯಲ್ಲಿ ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಅವರು ಶ್ರೀಯವರ ಅಶ್ವತ್ಥಾಮನ್ ಬಗ್ಗೆಯೂ ಡಾ॥ ರಾಮಚಂದ್ರ ಶರ್ಮ ಅವರು ಶ್ರೀಯವರ ಇಂಗ್ಲಿಷ್ ಗೀತಗಳ ಬಗ್ಗೆಯೂ ಶ್ರೀಮತಿ ಲೀಲಾವತಿ ಎಸ್. ರಾವ್ ಅವರು ಶ್ರೀಯವರ ಬದುಕು ಬರಹವನ್ನು ಕುರಿತೂ ಪ್ರೊ॥ ಎಂ.ವಿ.ಸೀ. ಅವರ ಅಧ್ಯಕ್ಷತೆಯಲ್ಲಿ ಮಾತನಾಡಿದರು. ಇದರ ಜೊತೆಗೆ ಸ್ವಾಗತ ಸಮಿತಿ ದಕ್ಷಿಣ ಕನ್ನಡ ಜಿಲ್ಲಾ ಮಟ್ಟದಲ್ಲಿ ನಡೆಸಿದ್ದ ಬಿ.ಎಂ.ಶ್ರೀ.ಯವರ ನೆನಪಿನ ಪ್ರಬಂಧ ಸ್ಪರ್ಧೆಯಲ್ಲಿ ವಿಜೇತರಾದ ಅಭ್ಯರ್ಥಿಗಳಿಗೆ ಬಹುಮಾನ ಮತ್ತು ಪ್ರಶಸ್ತಿ ಪತ್ರ ವಿತರಣೆಯನ್ನೂ ಎಂ.ವಿ.ಸೀ.ಯವರು ನಡೆಸಿಕೊಟ್ಟರು. ತಾಳ್ತಜೆ ವಸಂತ ಕುಮಾರ್ ಈ ಗೋಷ್ಠಿಯ ನಿರ್ವಾಹಕರಾಗಿದ್ದು ಮಹಾಬಲೇಶ್ವರ ಹೆಬ್ಬಾರ್ ಅವರು ವಂದನೆ ಸಲ್ಲಿಸಿದರು.

ಶ್ರೀ ಬಿ. ಎಂ. ಇದಿನಬ್ಬ, ಶ್ರೀ ಗಣಪತಿ ಪದ್ಯಾಣ, ಶ್ರೀಮತಿ ಚಂದ್ರಕಲಾ ನಂದಾವರ ಅವರುಗಳು ಕಾರ್ಯಕ್ರಮಗಳ ನಡುವೆ ಶ್ರೀಯವರ ಗೀತೆಗಳನ್ನು ವಾಚನ ಮಾಡಿದರು. ಇಡೀ ಕಾರ್ಯಕ್ರಮ ಶ್ರೀ ಕೇಕಾನ ರಾಮಚಂದ್ರ ಅವರ ನಿರ್ದೇಶನದಲ್ಲಿ ವ್ಯವಸ್ಥಿತವಾಗಿ, ಬಹಳ ಅಚ್ಚುಕಟ್ಟಾಗಿ, ಯಶಸ್ವಿಯಾಗಿ ನಡೆಯಿತು.

ಸಂಜೆ ಶ್ರೀಯವರ ಅಶ್ವತ್ಥಾಮನ್ ನಾಟಕದ ವಾಕ್ಚಿತ್ರಣ ಬಹಳ ಚೆನ್ನಾಗಿ ಮೂಡಿಬಂತು. ಶ್ರೀಮತಿ ಜಯಶ್ರಿ, ಶ್ರೀ ಶ್ರೀನಿವಾಸ ಉಡುಪ, ಶ್ರೀ ಯಿ. ನಾರಾಯಣ ಶರ್ಮ ಮತ್ತು ಎಂ. ಶಾಮಸುಂದರ ಅವರುಗಳು ವ್ಯಾಳಿಯ ಮಹಾಬಲ ಭಟ್ಟ ಅವರ ನಿರ್ದೇಶನದಲ್ಲಿ ಬಹು ಚೆನ್ನಾಗಿ ಅಭಿನಯಿಸಿದರು. ಅನಂತರ ಶ್ರೀ ಜಿ. ಪುರಂದರ ಭಟ್ಟ ಅವರ ನಿರ್ದೇಶನದಲ್ಲಿ ಎಂ. ಎನ್. ಕಾಮತರ ಪುನರ್ಜನ್ಮ ನಾಟಕವೂ ನಡೆಯಿತು.

ಈ ಸಂದರ್ಭದಲ್ಲಿ ಶ್ರೀ ಶೇಖರ ಇಡ್ಯ ಅವರಿಂದ ಪುಸ್ತಕ ಪ್ರದರ್ಶನ ವ್ಯವಸ್ಥೆಯಾಗಿತ್ತು.

**ಸಂಪಿಗೆಯಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ:**

ತುಮಕೂರು ಜಿಲ್ಲೆ ತುರುವೇಕೆರೆ ತಾಲೂಕು ಸಂಪಿಗೆ ಬಿ. ಎಂ. ಶ್ರೀಕಂಠಯ್ಯನವರು ಹುಟ್ಟಿದ ಸ್ಥಳ. ಇಲ್ಲಿ ದಿನಾಂಕ 8-12-84ರಂದು ಬಿ.ಎಂ.ಶ್ರೀ. ಪ್ರತಿಷ್ಠಾನ ಬಿ.ಎಂ.ಶ್ರೀ. ಕಾರ್ಯಕ್ರಮವನ್ನು ನಡೆಸಿತು. ಸರ್ವೋಚ್ಚ ನ್ಯಾಯಾಲಯದ ನ್ಯಾಯಮೂರ್ತಿಗಳಾದ ಶ್ರೀ ಇ. ಎಸ್. ವೆಂಕಟರಾಮಯ್ಯ ಅವರು ಕಾರ್ಯಕ್ರಮವನ್ನು ಉದ್ಘಾಟನೆ ಮಾಡಿದರು. ಕಾರ್ಯಕ್ರಮ ಬಿ.ಎಂ.ಶ್ರೀ.ಯವರು ಹುಟ್ಟಿದ ಮನೆಯ ಮುಂದೆ ಸಂಪಿಗೆ ದೇವಾಲಯದ ಆವರಣದಲ್ಲಿ ವ್ಯವಸ್ಥೆಯಾಗಿತ್ತು. ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರ ಅಧ್ಯಕ್ಷತೆಯಲ್ಲಿ ಪ್ರೊ॥ ಜಿ. ವೆಂಕಟಸುಬ್ಬಯ್ಯ, ಪ್ರೊ॥ ಎಲ್. ಎಸ್. ಶೇಷಗಿರಿರಾವ್, ಪ್ರೊ॥ ಎಂ. ವಿ. ಸೀತಾರಾಮಯ್ಯ, ಶ್ರೀ ಎಲ್. ಶಾಮಣ್ಣ ಅವರುಗಳು ಮಾತನಾಡಿದರು. ಶ್ರೀ ಎಸ್. ನಾಗೇಶರಾವ್ ಅವರು ಬಿ.ಎಂ.ಶ್ರೀ. ಅವರ ಗೀತೆಗಳನ್ನು ಗಾಯನ ಮಾಡಿದರು. ಶ್ರೀ ಕಡಬ ದೊರೆಸ್ವಾಮಿ ಅಯ್ಯಂಗಾರ್ ಅವರು ಶ್ರೀಯವರನ್ನು ಕುರಿತ ಕವನವನ್ನು ಓದಿದರು.

ಇದೇ ಸಂದರ್ಭದಲ್ಲಿ ಜಿಲ್ಲೆಯ ರಾಷ್ಟ್ರಪ್ರಶಸ್ತಿ ವಿಜೇತ ಉಪಾಧ್ಯಾಯರಾದ ಶ್ರೀ ಎಸ್. ರಂಗನಾಥರಾವ್ ಅವರಿಗೆ ಗ್ರಾಮಸ್ಥರು ಅಭಿನಂದನೆಯನ್ನು ಸಲ್ಲಿಸಿ ಕಾಣಿಕೆ ಅರ್ಪಿಸಿದರು. ಕಾರ್ಯಕ್ರಮದಲ್ಲಿ ಜಿಲ್ಲೆಯ ಶಾಸಕರೂ, ನ್ಯಾಯಮೂರ್ತಿಗಳಾದ ಶ್ರೀ ರಾಮಾಜೋಯಿಸ್ ಅವರೂ ಮತ್ತು ಇತರ ಅನೇಕ ಗಣ್ಯರೂ ಭಾಗ ವಹಿಸಿದ್ದರು.

ಕಾರ್ಯಕ್ರಮ ವ್ಯವಸ್ಥೆಗೆ ಸಹಿಯೊಂದಿಗೆ ನೆರವಾಗಿದ್ದ ಶ್ರೀ ಗೋಪಿವಲ್ಲಭ ಅಯ್ಯಂಗಾರ್ ಅವರು ಪ್ರಾರಂಭದಲ್ಲಿ ಪರಿಚಯ ಮಾಡಿದರು. ಶ್ರೀ ಎಂ. ವಿ. ಸತ್ಯನಾರಾಯಣ ಅವರು ವಂದನಾರ್ಪಣೆ ಮಾಡಿದರು.

## ಬಿ.ಎಂ.ಶ್ರೀ. ಸ್ಮಾರಕ

ಗ್ರಾಮಸ್ಥರಾದ ಶ್ರೀ ಎಲ್. ಶಾಮಣ್ಣ ಮುಂತಾದವರು ಸಂಪಿಗೆಯ ಕಾರ್ಯಕ್ರಮಕ್ಕೆ ವಿಶೇಷವಾಗಿ ನೆರವಾಗಿದ್ದರು. ಬಿ.ಎಂ.ಶ್ರೀ.ಯವರು ಹುಟ್ಟಿದ ಕೊಠಡಿ

ಯನ್ನು ಬಂಧುಗಳು ಉದಾರಮನಸ್ಸಿನಿಂದ ಬಿ.ಎಂ.ಶ್ರೀ. ಸ್ಮಾರಕ ನಿರ್ಮಾಣಕ್ಕೆ ದಾನಮಾಡಿದ್ದು–ಆ ಕೊಠಡಿಯಲ್ಲಿ ದೀಪ ಬೆಳಗಿ ಭಾವಚಿತ್ರ ಅನಾವರಣ ಮಾಡಲಾಯಿತು. ಬಿ.ಎಂ.ಶ್ರೀ. ಸ್ಮಾರಕ ಭವನವನ್ನಾಗಿ ಆ ಕೊಠಡಿಯನ್ನು ಪರಿವರ್ತಿಸಬೇಕೆಂದೂ ಅಲ್ಲಿ ಸದ್ಯಕ್ಕೆ ಒಂದು ಗ್ರಂಥಾಲಯವನ್ನು ತೆರೆದು ನಂತರ ಸಂಶೋಧನ ಕೇಂದ್ರವನ್ನಾಗಿ ಮಾಡಬೇಕೆಂದೂ ಪ್ರೊ॥ ಎಂ.ವಿ.ಸೀ. ಅವರು ಅಭಿಪ್ರಾಯಪಟ್ಟು ಸರ್ಕಾರದ ನೆರವಿಗಾಗಿ ಪ್ರಯತ್ನಿಸಲಾಗುವುದೆಂದರು.

**ಸರ್ಕಾರಿ ಕಿರಿಯ ಕಾಲೇಜು, ನಂಜನಗೂಡು :**

ನಂಜನಗೂಡು ಪೌರರು ಮತ್ತು ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನ ಇವುಗಳ ಸಂಯುಕ್ತ ಆಶ್ರಯದಲ್ಲಿ ಕಾಲೇಜಿನ ಸಭಾಂಗಣದಲ್ಲಿ 31-12-1984ರಂದು ಕಾರ್ಯಕ್ರಮ ನಡೆಯಿತು. ನಂಜನಗೂಡಿನಲ್ಲೇ ನೆಲೆಸಿರುವ ಬಿ.ಎಂ.ಶ್ರೀ.ಯವರ ಸೋದರರಾದ ಶ್ರೀ ಬಿ. ಎಂ. ಶಿವರಾಮಯ್ಯನವರು ಅಧ್ಯಕ್ಷರಾಗಿದ್ದರು. ಮಾಜಿ ವಿಧಾನ ಸಭಾ ಸದಸ್ಯರಾಗಿದ್ದ ಶ್ರೀ ಹೆಜ್ಜಿಗೆ ಎಂ. ಲಿಂಗಣ್ಣನವರು ಕಾರ್ಯಕ್ರಮವನ್ನು ಉದ್ಘಾಟನೆ ಮಾಡಿದರು. ನಂಜನಗೂಡಿನ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಮಿತಿಯ ಅಧ್ಯಕ್ಷರೂ ಪ್ರಸಿದ್ಧ ವೈದ್ಯರೂ ಆದ ಶ್ರೀ ಬಿ. ವಿ. ಬಾಲಸುಬ್ರಹ್ಮಣ್ಯಂ ಸ್ವಾಗತ ಮಾಡಿ ಪ್ರತಿಷ್ಠಾನದ ಶ್ರೀಭವನಕ್ಕೆ ನಂಜನಗೂಡು ಪೌರರ ಪರವಾಗಿ 'ನಿಧಿ' ಅರ್ಪಿಸಿದರು. ಕಾಲೇಜಿನ ಪ್ರಾಚಾರ್ಯರಾದ ಶ್ರೀ ಕೆ. ಬಿ. ಸೋಮಶೇಖರ್ ಅವರು ಪರಿಚಯ ಮಾಡಿಕೊಟ್ಟರು. ಶ್ರೀಮತಿ ಆರ್ಯಾಂಬ ಪಟ್ಟಾಭಿ ಮತ್ತು ಶ್ರೀ ರೇಣುಕಾಪ್ರಸನ್ನ ಅವರು ಮಾತನಾಡಿದರು. ಪ್ರೊ॥ ಎಂ.ವಿ.ಸೀ. ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದರು.

ಕೊನೆಯಲ್ಲಿ ಶ್ರೀಯವರ ಗೀತೆಗಳ ಗಾಯನ ಮತ್ತು ನಾಟಕ ದೃಶ್ಯಗಳ ಅಭಿನಯ ಏರ್ಪಡಿಸಲಾಗಿತ್ತು. ಕಾರ್ಯಕ್ರಮ ವ್ಯವಸ್ಥೆಗೆ ಪ್ರತಿಷ್ಠಾನದೊಂದಿಗೆ ಸಹಕರಿಸಿದ್ದ ಶ್ರೀ ಬಿ. ಕೆ. ಶ್ರೀಕಂಠಯ್ಯ ಅವರು ಕಾರ್ಯನಿರ್ವಹಣೆ ಮಾಡಿದರು. ಶ್ರೀ ಎಸ್. ಕೆ. ವೆಂಕಟರಮಣಾಚಾರ್ ವಂದನಾರ್ಪಣೆ ಮಾಡಿದರು.

**ತಿಪಟೂರು ಚನ್ನರಾಯಪಟ್ಟಣಗಳಲ್ಲಿ:** ಬಿ.ಎಂ.ಶ್ರೀ. ಪ್ರತಿಷ್ಠಾನ ಮತ್ತು ಕಲ್ಪತರು ವಿಜ್ಞಾನ ಹಾಗೂ ಹಲ್ಲಾಗಟ್ಟಿ ಅಡವಪ್ಪ ಕಲಾ ವಾಣಿಜ್ಯ ಕಾಲೇಜುಗಳ ಆಶ್ರಯದಲ್ಲಿ ದಿನಾಂಕ 28–1–85ರಂದು ಇಡೀ ದಿನ ಕಾರ್ಯಕ್ರಮ ನಡೆಯಿತು. ಈ ಕಾರ್ಯಕ್ರಮ ವ್ಯವಸ್ಥೆಗೆ ನೆರವಾಗಿದ್ದ ಶ್ರೀ ಎಂ. ವಿ. ಶ್ರೀನಿವಾಸಮೂರ್ತಿ ಅವರು ಬೆಳಗ್ಗಿನ ಕಾರ್ಯಕ್ರಮಕ್ಕೆ ಸ್ವಾಗತ ಮಾಡಿ ಪರಿಚಯಿಸಿದರು. ಶಾಸಕರಾದ ಶ್ರೀ ಎಸ್. ಪಿ. ಗಂಗಾಧರಪ್ಪ ಅವರು ಉದ್ಘಾಟನೆ ಮಾಡಿದರು. ಶ್ರೀ ಜಿ. ನಾರಾಯಣ ಮತ್ತು ಡಾ॥ ರಾಮಚಂದ್ರ ಶರ್ಮ ಅವರು ಮಾತನಾಡಿದರು. ಅಧ್ಯಕ್ಷತೆ ವಹಿಸಿದ್ದ ಕಲ್ಪತರು ಕಾಲೇಜಿನ ಪ್ರಾಚಾರ್ಯರಾದ ಪ್ರೊ॥ ಟಿ. ಡಿ. ಸುಬ್ಬಣ್ಣ ಅವರು ವಂದನಾರ್ಪಣೆ ಮಾಡಿದರು.

ಮಧ್ಯಾಹ್ನದ ಕಾರ್ಯಕ್ರಮದಲ್ಲಿ ಶ್ರೀ ಎಂ. ವಿ. ಸತ್ಯನಾರಾಯಣ ಅವರು ಮಾತನಾಡಿದರು. ಡಾ॥ ಶರ್ಮರು ತಮ್ಮ ಕೆಲವು ಪದ್ಯಗಳನ್ನು ಓದಿದರು. ಪುರಸಭಾಧ್ಯಕ್ಷರಾದ ಶ್ರೀ ಎಚ್. ವಿ. ಶ್ರೀನಿವಾಸ ಅವರು ಮುಖ್ಯ ಅತಿಥಿಗಳಾಗಿದ್ದರು. ಪ್ರೊ॥ ಎಂ ವಿ.ಸೀ. ಅವರು ಅಧ್ಯಕ್ಷರಾಗಿದ್ದರು. ಪಲ್ಲಾಗಟ್ಟಿ ಅಡವಪ್ಪ ಕಲಾ ವಾಣಿಜ್ಯ ಕಾಲೇಜಿನ ಪ್ರಾಚಾರ್ಯರಾದ ಶ್ರೀಮತಿ ಪ್ರೊ॥ ಸುಜಯ ಅವರು ಸ್ವಾಗತ ಕೋರಿದರು. ಶ್ರೀ ಟಿ. ಎಸ್. ನಾಗರಾಜ ಶೆಟ್ಟಿ ಅವರು ನಿರ್ದೇಶಿಸಿದರು.

ದಿನಾಂಕ 29-1-1985 ಮಂಗಳವಾರ ಸಂಜೆ ಚನ್ನರಾಯಪಟ್ಟಣದ ಕರ್ನಾಟಕ ಸಂಘದ ಆಶ್ರಯದಲ್ಲಿ ನವೋದಯ ಕಿರಿಯ ಕಾಲೇಜಿನ ಸಭಾಂಗಣದಲ್ಲಿ ಪ್ರತಿಷ್ಠಾನ ಕಾರ್ಯಕ್ರಮ ವ್ಯವಸ್ಥೆ ಮಾಡಿತ್ತು. ಎಂ.ವಿ.ಸೀ. ಅವರ ಅಧ್ಯಕ್ಷತೆಯಲ್ಲಿ ಶ್ರೀಯುತರಾದ ಜೆ. ಆರ್. ನಂಜುಂಡೇಗೌಡ. ಎಂ. ವಿ. ಸತ್ಯನಾರಾಯಣ ಮಳಲಿ ವಸಂತಕುಮಾರ್, ಡಾ॥ ರಾಮಚಂದ್ರಶರ್ಮ. ಪಿ. ಬಸವರಾಜು ಅವರುಗಳು ಮಾತನಾಡಿದರು. ಶಾಲಾ ಮಕ್ಕಳು ಮತ್ತು ಸ್ಥಳೀಯ ಕಲಾವಿದರಿಂದ ಶ್ರೀಯವರ ಗೀತೆಗಳ ಗಾಯನ, ನೃತ್ಯ ಮತ್ತು ನಾಟಕ ದೃಶ್ಯಗಳ ಪ್ರದರ್ಶನ ನಡೆದವು. ಕಾರ್ಯಕ್ರಮ ವ್ಯವಸ್ಥೆಗೆ ನೆರವಾದ ಶ್ರೀ ಸಂಘದ ಅಧ್ಯಕ್ಷರಾದ ಶ್ರೀ ಸಿ. ಆರ್. ಶ್ರೀನಿವಾಸ ಅಯ್ಯಂಗಾರ್ ಅವರು ಸ್ವಾಗತ ಮಾಡಿದರು. ಶ್ರೀ ಎಲ್. ಎಸ್. ರಾಮನ್ ವಂದನೆ ಸಲ್ಲಿಸಿದರು. ಕಾರ್ಯದರ್ಶಿಗಳಾದ ಶ್ರೀ ಸಿ. ಆರ್. ನಂಜುಂಡಯ್ಯ ಕಾರ್ಯ ನಿರ್ವಹಿಸಿಕೊಟ್ಟರು.

**ಉತ್ತರಕನ್ನಡ ಜಿಲ್ಲೆಯಲ್ಲಿ ಬಿ.ಎಂ.ಶ್ರೀ. ನೆನಪು: ಸರ್ಕಾರಿ ಕಾಲೇಜು, ಸಿರಸಿ:**

ದಿನಾಂಕ 31-1-1985ರಂದು ಸಿರ್ಸಿ ಸರ್ಕಾರಿ ಕಾಲೇಜಿನಲ್ಲಿ ಪ್ರತಿಷ್ಠಾನ ಮತ್ತು ಕಾಲೇಜುಗಳ ಸಹಯೋಗದಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮ ನಡೆಯಿತು. ಕಾಲೇಜಿನ ಪ್ರಾಚಾರ್ಯರು ಸ್ವಾಗತ ಕೋರಿ ಪರಿಚಯಿಸಿದರು. ಶ್ರೀ ಎಂ. ವಿ. ಶ್ರೀನಿವಾಸಮೂರ್ತಿ ಮತ್ತು ಟಿ. ಎಸ್. ನಾಗರಾಜಶೆಟ್ಟಿ ಅವರುಗಳು ಮಾತನಾಡಿದರು. ನಿವೃತ್ತ ಪ್ರಾಚಾರ್ಯರೂ ವಿದ್ವಾಂಸರೂ ಆದ ಪ್ರೊ॥ ಬಿ. ಎಚ್. ಶ್ರೀಧರ ಅವರು ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಕಾರ್ಯಕ್ರಮ ವ್ಯವಸ್ಥೆಗೆ ಶ್ರೀಯುತರು ನೆರವಾಗಿದ್ದರು.

**ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ ಸಮಾರೋಪ ಸಮಾರಂಭ**

**ಶ್ರೀ ಸಂಸ್ಮರಣ ಸಂಪುಟಗಳ ಬಿಡುಗಡೆ ಮತ್ತು ಬಹುಮಾನ ವಿತರಣೆ:**

ಇಡೀ ವರ್ಷ ನಾಡಿನಾದ್ಯಂತ ಮತ್ತು ರಾಷ್ಟ್ರದ ಪ್ರಮುಖ ಸ್ಥಳಗಳಲ್ಲಿ ಕನ್ನಡದ ಆಚಾರ್ಯಪುರುಷರಾದ ಬಿ.ಎಂ.ಶ್ರೀಕಂಠಯ್ಯನವರ ಸಂದೇಶಗಳ ಪ್ರಚಾರ ಮತ್ತು ಅವರ ಸಾಹಿತ್ಯ ಪ್ರಸಾರ ಕಾರ್ಯವನ್ನು ಯಶಸ್ವಿಯಾಗಿ, ವೈವಿಧ್ಯಮಯ

ವಾಗಿ ನಡೆಸಿದ ಪ್ರತಿಷ್ಠಾನ ದಿನಾಂಕ 23-2-1985ರಂದು ಶತಮಾನೋತ್ಸವ ಕಾರ್ಯಕ್ರಮಗಳಿಗೆ ಮುಕ್ತಾಯ ಹಾಡಿತು. ಇದು ಔಪಚಾರಿಕವಾಗಿಯಷ್ಟೇ, ಇವರ ನಂತರವೂ ಕೆಲವು ಕಾರ್ಯಕ್ರಮಗಳು ನಡೆದವು. ಈ ಕಾರ್ಯಕ್ರಮಗಳು ಮುಕ್ತಾಯ ಸಮಾರಂಭಕ್ಕೆ ಮೊದಲೇ ನಡೆಯಬೇಕಾಗಿದ್ದವು. ಅನಿವಾರ್ಯ ಕಾರಣಗಳಿಂದ ಮುಂದೂಡಲ್ಪಟ್ಟಿದ್ದವು.

ಅಂದು ಗೋಖಲೆ ಸಂಸ್ಥೆಯ ಸಭಾಂಗಣದಲ್ಲಿ ಬೆಳಗ್ಗೆ 10 ಗಂಟೆಗೆ ಜ್ಞಾನಪೀಠ ಪ್ರಶಸ್ತಿ ವಿಜೇತರಾದ, ಪ್ರತಿಷ್ಠಾನದ ಆಜೀವ ಗೌರವಪೋಷಕರೂ ಆದ ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಸಮಾರಂಭದ ಉದ್ಘಾಟನೆಯನ್ನು ಮಾಡಿ 'ಶ್ರೀನಿಧಿ' ಸಂಸ್ಮರಣ ಸಂಪುಟವನ್ನು ಬಿಡುಗಡೆ ಮಾಡಿದರು. ಪ್ರತಿಷ್ಠಾನದ ಆಜೀವ ಗೌರವ ಪೋಷಕರೂ ಆದ, ಡಾ|| ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರು ಸಮಾರಂಭದ ಉದ್ಘಾಟನೆಯನ್ನು ಮಾಡಿ 'ಶ್ರೀನಿಧಿ' ಸಂಸ್ಮರಣ ಸಂಪುಟವನ್ನು ಬಿಡುಗಡೆ ಮಾಡಿದರು. ಪ್ರತಿಷ್ಠಾನದ ಅಧ್ಯಕ್ಷರಾದ ಶ್ರೀ ನಿಟ್ಟೂರು ಶ್ರೀನಿವಾಸ ರಾವ್ ಅವರು ಅಧ್ಯಕ್ಷತೆ ವಹಿಸಿದ್ದರು. ಡಾ|| ಸಿದ್ದಯ್ಯ ಪುರಾಣಿಕ ಅವರು ಇಂಗ್ಲಿಷ್ ಸಂಸ್ಮರಣ ಸಂಪುಟ 'ಬಿ.ಎಂ.ಎಸ್. ದಿ ಮ್ಯಾನ್ ಅಂಡ್ ಹಿಸ್ ಮಿಷನ್' ಮತ್ತು ಸಂಸ್ಮರಣ ಸಂಚಿಕೆ 'ಶ್ರೀಗಂಧ' ಇವುಗಳನ್ನು ಬಿಡುಗಡೆ ಮಾಡಿದರು. ಉಪಾಧ್ಯಕ್ಷರಾದ ಪ್ರೊ|| ಎಂ. ವಿ. ಸೀತಾರಾಮಯ್ಯನವರು ಪ್ರಾಸ್ತಾವಿಕ ಭಾಷಣ ಮಾಡುತ್ತಾ, ಪ್ರತಿಷ್ಠಾನ ಶ್ರೀಯವರ ಶತಮಾನೋತ್ಸವ ಕಾರ್ಯಕ್ರಮ ವಹಿಸಿಕೊಂಡ ಹಿನ್ನೆಲೆ, ಪ್ರತಿಷ್ಠಾನದ ಪರಿಚಯ, ಪ್ರತಿಷ್ಠಾನಕ್ಕೆ ಆಗಬೇಕಾದ ಕೆಲಸಗಳ ವಿವರಣೆ ನೀಡಿ, ಉತ್ಸವಕ್ಕೆ ನೆರವಾದ ಎಲ್ಲ ಮಹನೀಯರಿಗೆ ಕೃತಜ್ಞತೆ ಸಮರ್ಪಣೆ ಮಾಡಿದರು. ಉತ್ಸವ ಸಮಿತಿಯ ಕಾರ್ಯಾಧ್ಯಕ್ಷರಾದ ಶ್ರೀ ಜಿ. ನಾರಾಯಣ ಅವರು ಸ್ವಾಗತ ಕೋರಿ, ಶತಮಾನೋತ್ಸವ ಸಮಿತಿ ಹಾಕಿಕೊಂಡಿದ್ದ ಯೋಜನೆಯನ್ನೂ ನಡೆಸಿದ ಸಾಧನೆಗಳನ್ನೂ ವಿವರಿಸಿದರು. ಪ್ರಾರಂಭದಲ್ಲಿ ಶ್ರೀ ಎಸ್. ನಾಗೇಶರಾವ್ ಪ್ರಾರ್ಥನೆ ಮಾಡಿದರು. ಆರ್. ಎಚ್. ರಾಜು ವಂದನಾರ್ಪಣೆ ಮಾಡಿದರು. ಜಿ. ಕೆ. ಗುಂಡೂರಾವ್ ನಿರ್ವಹಣೆ ಮಾಡಿದರು.

ಮಧ್ಯಾಹ್ನ ನಡೆದ ಉಪನ್ಯಾಸಮಾಲಿಕೆಯಲ್ಲಿ ನಾಡಿನ ಪ್ರಸಿದ್ಧ ಸಾಹಿತಿಗಳಾದ ಡಾ|| ಸಾ. ಶಿ. ಮರುಳಯ್ಯ, ಡಾ|| ಎಂ. ಚಿದಾನಂದಮೂರ್ತಿ, ಶ್ರೀ ಕೆ. ನರಸಿಂಹಮೂರ್ತಿ ಅವರುಗಳು 'ಶ್ರೀ ಮತ್ತು ಕನ್ನಡಿಗರ ಸಂಘಟನೆ', 'ಶ್ರೀಯವರ ಕನ್ನಡಾಭಿಮಾನ ಮತ್ತು ರಾಷ್ಟ್ರಾಭಿಮಾನ', 'ಶ್ರೀಯವರ ಜೀವನ ದರ್ಶನ' ಎಂಬ ವಿಷಯಗಳ ಬಗ್ಗೆ ಮಾತನಾಡಿದರು. ಕರ್ನಾಟಕ ವಿಶ್ವವಿದ್ಯಾನಿಲಯದ ನಿವೃತ್ತ ಉಪಕುಲಪತಿಗಳಾದ ಡಾ|| ಆರ್. ಸಿ. ಹಿರೇಮಠ ಅವರು ಅಧ್ಯಕ್ಷತೆ ವಹಿಸಿದ್ದರು. ಡಾ|| ಪಿ. ವಿ. ನಾರಾಯಣ ಅವರು ಈ ಕಾರ್ಯಕ್ರಮದ ನಿರ್ವಹಣೆ ಮಾಡಿದರು.

ಉತ್ಸವ ಕಾರ್ಯಕ್ರಮಗಳ ಜೊತೆಗೆ ಪ್ರತಿಷ್ಠಾನ ರಾಜ್ಯದ ವಿದ್ಯಾರ್ಥಿಗಳಿಗೂ ಶ್ರೀಯವರ ಸಂದೇಶಗಳು ಪರಿಚಯವಾಗಬೇಕೆಂಬ ಉದ್ದೇಶದಿಂದ ರಾಜ್ಯಮಟ್ಟದಲ್ಲಿ ಕಾಲೇಜು ಮತ್ತು ಪ್ರೌಢಶಾಲೆಗಳ ಹಂತದಲ್ಲಿ ಬಿ.ಎಂ.ಶ್ರೀ. ಪ್ರಬಂಧ ಸ್ಪರ್ಧೆಗಳನ್ನು ವ್ಯವಸ್ಥೆ ಮಾಡಿತ್ತು. ಈ ಸ್ಪರ್ಧೆಯಲ್ಲಿ ಭಾಗವಹಿಸಿ ವಿಜೇತರಾದ ಶಾಲೆ ಮತ್ತು ಕಾಲೇಜುಗಳ ವಿದ್ಯಾರ್ಥಿಗಳಿಗೆ ಕನ್ನಡ-ಸಂಸ್ಕೃತಿ ಇಲಾಖೆಯ ನಿರ್ದೇಶಕರಾದ ಶ್ರೀ ಐ. ಎಂ. ವಿಠ್ಠಲಮೂರ್ತಿ ಅವರು ಬಹುಮಾನಗಳನ್ನು ಮತ್ತು ಪ್ರಶಸ್ತಿಪತ್ರಗಳನ್ನು ನೀಡಿದರು. ಜೊತೆಗೆ 'ದತ್ತಿ ಉಪನ್ಯಾಸಗಳು-1984' ಮತ್ತು 'ಲೋಚನ-ಶ್ರೀ ವಿಶೇಷಾಂಕ'ಗಳನ್ನು ಬಿಡುಗಡೆ ಮಾಡಿದರು.

ಕಾರ್ಯಕ್ರಮದ ಅಧ್ಯಕ್ಷರಾಗಿದ್ದ ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್ ಅವರು 'ಇಂಗ್ಲಿಷ್ ಗೀತಗಳು' ಮತ್ತು 'ವೈವಸ್ವತ ಮನು'ಗಳನ್ನು ಬಿಡುಗಡೆ ಮಾಡಿದರು. ಶ್ರೀ ಎಸ್. ನಾಗೇಶರಾವ್ ಮತ್ತು ಕುಮಾರಿ ಜಿ. ಎನ್. ಶಾರದ ಅವರಿಂದ ಬಿ.ಎಂ.ಶ್ರೀ. ಗೀತೆಯ ಗಾಯನವನ್ನು ಏರ್ಪಡಿಸಲಾಗಿತ್ತು.

ಪ್ರಾರಂಭದಲ್ಲಿ ಎಂ.ವಿ.ಸೀ. ಅವರು ಮಾತನಾಡಿ, ಉತ್ಸವ ಕಾರ್ಯಕ್ರಮದಲ್ಲಿ ನೆರವಾದ ಎಲ್ಲ ಮಹನೀಯರಿಗೂ ಕೃತಜ್ಞತೆ ಸಮರ್ಪಣೆ ಮಾಡಿ ಉತ್ಸವ ಸಮಿತಿಯ ಕಾರ್ಯಾಧ್ಯಕ್ಷರಾಗಿದ್ದು ವಿಶೇಷವಾಗಿ ಸೇವೆ ಸಲ್ಲಿಸಿದ ಶ್ರೀ ಜಿ. ನಾರಾಯಣ ಅವರಿಗೆ ಪ್ರತಿಷ್ಠಾನದ ನೆನಪಿಗಾಗಿ ಶ್ರೀಗಂಧದ ಸರಸ್ವತಿ ವಿಗ್ರಹವನ್ನು ಅರ್ಪಿಸಿದರು. ಶ್ರೀ ಸಂಸ್ಮರಣ ಸಂಪುಟಗಳ ಸಂಪಾದಕರಾದ ಡಾ॥ ಜಿ. ಎಸ್. ಶಿವರುದ್ರಪ್ಪ (ಶ್ರೀನಿಧಿ), ಡಾ॥ ರಾಮಚಂದ್ರಶರ್ಮ (ಇಂಗ್ಲಿಷ್ ಸಂಪುಟ), ಶ್ರೀ ಜಿ. ಶ್ರೀನಿವಾಸ ರಾಜು (ಶ್ರೀಗಂಧ) ಅವರುಗಳಿಗೆ ಮತ್ತು ಪ್ರಕಟನ ಸಮಿತಿ ಅಧ್ಯಕ್ಷರಾದ ಡಾ॥ ರಂ. ಶ್ರೀ. ಮುಗಳಿ ಅವರಿಗೆ ಹಾಗೂ ಇತರ ಗಣ್ಯರುಗಳಿಗೆ ಗೌರವಕಾಣಿಕೆಗಳನ್ನು ಅರ್ಪಿಸಲಾಯಿತು.

ಪ್ರತಿಷ್ಠಾನದ ಕಾರ್ಯದರ್ಶಿಗಳಾದ ಶ್ರೀ ಎಂ. ವಿ. ಸತ್ಯನಾರಾಯಣ ಅವರು ಕಾರ್ಯಕ್ರಮ ನಿರ್ವಹಿಸಿದರು. ನಾ. ಗೀತಾಚಾರ್ಯ ಅವರು ವಂದನಾರ್ಪಣೆ ಮಾಡಿದರು. ಈ ಸಂದರ್ಭದಲ್ಲಿ ಶ್ರೀ ವಿಜಯೇಂದ್ರ ಮತ್ತು ಕು॥ ವಸಂತ ಅವರ ನೇತೃತ್ವದಲ್ಲಿ ಪ್ರತಿಷ್ಠಾನದ ಪ್ರಕಟನೆಗಳ ಪ್ರದರ್ಶನ ಮತ್ತು ಮಾರಾಟ ವ್ಯವಸ್ಥೆಯಾಗಿತ್ತು.

## ಅಶ್ವತ್ಥಾಮನ್ ನಾಟಕ ಪ್ರದರ್ಶನ

ಈ ಮುಕ್ತಾಯ ಸಮಾರಂಭದ ಅಂಗವಾಗಿ ದಿನಾಂಕ 8-3-1985ರಂದು ಕನ್ನಡ ಮತ್ತು ಸಂಸ್ಕೃತಿ ಇಲಾಖೆ ರವೀಂದ್ರಕಲಾಕ್ಷೇತ್ರದಲ್ಲಿ 'ಅಶ್ವತ್ಥಾಮನ್' ನಾಟಕ ಪ್ರದರ್ಶನವನ್ನು ವ್ಯವಸ್ಥೆ ಮಾಡಿತ್ತು. ಶ್ರೀ ಜಿ. ವಿ. ಶಿವಾನಂದ ಅವರ ನಿರ್ದೇಶನದಲ್ಲಿ ಮೈಸೂರಿನ 'ಅಮರಕಲಾ ಸಂಘ' ನಾಟಕವನ್ನು ಅಭಿನಯಿಸಿತು.

## ಮನೆಮನೆಗೆ ಶ್ರೀಸಾಹಿತ್ಯ ಪ್ರಸಾರ

ಸಮಾರೋಪ ಸಮಾರಂಭದ ಅಂಗವಾಗಿಯೇ ಈ ವಿಶಿಷ್ಟ ಕಾರ್ಯಕ್ರಮವನ್ನೂ ಸಂಯೋಜಿಸಲಾಗಿತ್ತು. ಈ ಕಾರ್ಯಕ್ರಮ 24-3-1985ರಂದು ವಿಜಯನಗರ ಬಡಾವಣೆಯಲ್ಲಿ ಭಾರತೀಯ ಸಂಸ್ಕೃತಿ ವಿದ್ಯಾಪೀಠದ ಕಿರಿಯ ಕಾಲೇಜಿನಲ್ಲಿ ನಡೆಯಿತು. ಬಿ.ಎಂ.ಶ್ರೀ. ಪ್ರತಿಷ್ಠಾನ ಪ್ರಕಟಿಸಿರುವ ಬಿ.ಎಂ.ಶ್ರೀ.ಯವರ ವಿಶೇಷ ಪ್ರಕಟನೆಗಳನ್ನು ಸುಮಾರು 150 ಜನ ಕಾರ್ಯಕರ್ತರು ಮನೆಮನೆಗೆ ಕೊಂಡೊಯ್ದು ಮಾರಾಟ ಮಾಡಿದರು. ಈ ಕಾರ್ಯಕ್ರಮದ ಉದ್ಘಾಟನೆಯನ್ನು ಶ್ರೀ ಐ. ಎಂ. ವಿಠ್ಠಲಮೂರ್ತಿ ಅವರು ಕಾರ್ಯಕರ್ತರ ತಂಡದ ನಾಯಕರಿಗೆ ಸಮವಸ್ತ್ರ ಮತ್ತು ಪುಸ್ತಕಗಳನ್ನು ನೀಡುವುದರ ಮೂಲಕ ನೆರವೇರಿಸಿದರು. ಅಧ್ಯಕ್ಷರಾಗಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಮತ್ತು ಅತಿಥಿಗಳಾಗಿ ಪ್ರೊ॥ ಎಂ.ವಿ.ಸೀ. ಹಾಗೂ ಶ್ರೀ ಜಿ. ನಾರಾಯಣರು ಭಾಗವಹಿಸಿದ್ದರು. ಆರ್. ಎಚ್. ರಾಜು ವಂದಿಸಿದರು. ಕಾರ್ಯಕ್ರಮ ವ್ಯವಸ್ಥೆಗೆ ವಿಶೇಷವಾಗಿ ಶ್ರಮಿಸಿದ ಶ್ರೀ ಜಿ. ಕೆ. ಗುಂಡೂರಾವ್ ಅವರು ನಿರ್ವಹಣೆ ಮಾಡಿದರು.

ನಂತರ ಹದಿನೈದು ತಂಡಗಳಲ್ಲಿ ಪ್ರತಿ ತಂಡದಲ್ಲಿ ಹತ್ತು ಜನ ಕಾರ್ಯಕರ್ತರು, ಒಬ್ಬ ನಾಯಕ, ಒಬ್ಬ ಸಹಾಯಕರೊಂದಿಗೆ ಶ್ರೀಸಾಹಿತ್ಯವನ್ನು ವಿಜಯನಗರ ಬಡಾವಣೆಯ ವಿವಿಧ ಭಾಗಗಳಲ್ಲಿ ಮನೆಮನೆಗೆ ಹೋಗಿ ಮಾರಾಟ ಮಾಡಿದರು. ಕೇವಲ ಎರಡು ಗಂಟೆಯ ಈ ಸಾಹಸದಲ್ಲಿ ಅದ್ಭುತ ಯಶಸ್ಸು ಲಭಿಸಿತು. ಸುಮಾರು ನಾಲ್ಕುಸಾವಿರ ರೂ.ಗಳ ಶ್ರೀ ಪ್ರಕಟನೆಗಳು ಮಾರಾಟವಾದವು. ಇದು ಕಾರ್ಯಕರ್ತರಿಗೆ ಹುಮ್ಮಸ್ಸನ್ನು, ಹೊಸ ಹೊಸ ಅನುಭವಗಳನ್ನು ತಂದುಕೊಟ್ಟಿತು.

ಶ್ರೀ ಸಾಹಿತ್ಯ ಪ್ರಸಾರದಲ್ಲಿ ನೆರವಾದ ಕಾರ್ಯಕರ್ತರಿಗೆ ಊಟದ ವ್ಯವಸ್ಥೆಯಿತ್ತು. ಸಂಜೆ, ಭಾಷಣಮಾಲಿಕೆಯಲ್ಲಿ ಡಾ॥ ರಂ. ಶ್ರೀ. ಮುಗಳಿ ಅವರ ಅಧ್ಯಕ್ಷತೆಯಲ್ಲಿ ಡಾ॥ ಗೊರೂರು ರಾಮಸ್ವಾಮಿ ಅಯ್ಯಂಗಾರ್. ಪ್ರೊ॥ ಜಿ. ಎಸ್. ಸಿದ್ದಲಿಂಗಯ್ಯ. ಪ್ರೊ॥ ಸಾ. ಶಿ. ಮರುಳಯ್ಯ, ಶ್ರೀಮತಿ ಎಚ್. ಎಸ್. ಪಾರ್ವತಿ, ಶ್ರೀ ಟಿ. ಆರ್. ಮಹದೇವಯ್ಯ. ಶ್ರೀ ಎಚ್. ಆರ್. ದಾಸೇಗೌಡ, ಶ್ರೀ ಹಿ. ಚಿ. ಶಾಂತವೀರಯ್ಯ ಅವರುಗಳು ಶ್ರೀಯವರನ್ನು ಕುರಿತು ವಿವಿಧ ವಿಷಯಗಳಲ್ಲಿ ಭಾಷಣ ಮಾಡಿದರು. ಇದಕ್ಕೆ ಮೊದಲು ಪ್ರತಿ ತಂಡದ ಪ್ರತಿನಿಧಿಗಳು ಮನೆಮನೆಗೆ ಶ್ರೀ ಸಾಹಿತ್ಯ ಮಾರಾಟ ಮಾಡಲು ಹೋದಾಗ ತಮಗಾದ ವಿಶಿಷ್ಟ ಅನುಭವಗಳನ್ನು ಸಭಿಕರೊಂದಿಗೆ ಹಂಚಿಕೊಂಡರು. ಭಾರತೀಯ ಸಂಸ್ಕೃತಿ ವಿದ್ಯಾಪೀಠ ಕಾಲೇಜು, ಹೈಸ್ಕೂಲುಗಳ ಅಧ್ಯಾಪಕರು, ವಿದ್ಯಾರ್ಥಿನಿಯರು, ಕಲಾವೇದಿಕೆ, ಮಿತ್ರವೃಂದ, ಕಾಳಿದಾಸ ಸಾಂಸ್ಕೃತಿಕ ಸಂಘ. ಮೈಸೂರು ರಸ್ತೆ ಕನ್ನಡ ಕ್ರಿಯಾಸಮಿತಿ, ಪಾರ್ವತಿ ಮಹಿಳಾ ಸಮಾಜ ಮುಂತಾದ ಬಡಾವಣೆಗಳಲ್ಲಿರುವ ಸಂಘಗಳ ಸದಸ್ಯರುಗಳು ಈ ಕಾರ್ಯಕ್ರಮದ ಯಶಸ್ಸಿಗೆ ನೆರವಾಗಿದ್ದರು.

ಕಾರ್ಯಕ್ರಮದ ಕೊನೆಯಲ್ಲಿ ಕನ್ನಡ ಸಾಹಿತ್ಯ ಪರಿಷತ್ತಿನ ನೆರವಿನಿಂದ ಸಾಕ್ಷ್ಯಚಿತ್ರವನ್ನು ಪ್ರದರ್ಶಿಸಲಾಯಿತು. ಮತ್ತು ಕುಮಾರಿ ಬಿ. ಎಸ್. ಶಾರದ ಅವರಿಂದ ಬಿ.ಎಂ.ಶ್ರೀ. ಗೀತೆಗಳ ಹಾಡುಗಾರಿಕೆಯಿತ್ತು. ಈ ಸಂದರ್ಭದಲ್ಲಿ ಪ್ರತಿಷ್ಠಾನ, ಪರಿಷತ್ತು, ನವಕರ್ನಾಟಕ, ವಿನೋದ ಪುಸ್ತಕಾಲಯಗಳು ಪುಸ್ತಕ ಪ್ರದರ್ಶನ ಮತ್ತು ಮಾರಾಟವನ್ನು ವ್ಯವಸ್ಥೆಗೊಳಿಸಿದ್ದವು.

## ಹೊರನಾಡುಗಳಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ

**ಮಹಾರಾಷ್ಟ್ರ**

**ಬಸವ ಸಮಿತಿ, ಸೊಲ್ಲಾಪುರ:** ದಿನಾಂಕ 28-7-1984ರಂದು ನಡೆದ ಈ ಕಾರ್ಯಕ್ರಮದ ವರದಿಗೆ ಪುಟ 43 ನೋಡಿ.

**ಕರ್ನಾಟಕ ಸಂಘ, ನಾಗಪುರ:** ದಿನಾಂಕ 22-8-1984ರಂದು ಪ್ರತಿಷ್ಠಾನ ಸಂಘದ ಜೊತೆ ಸೇರಿ ಸಂಘದ ಸಭಾ ಭವನದಲ್ಲಿ ಕಾರ್ಯಕ್ರಮ ನಡೆಸಿತು. ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಕಾರ್ಯಕ್ರಮದಲ್ಲಿ ಮುಖ್ಯ ಅತಿಥಿಗಳಾಗಿ ಭಾಗವಹಿಸಿದ್ದರು. ಸಂಘದ ಅಧ್ಯಕ್ಷರು ಕಾರ್ಯಕ್ರಮದ ಅಧ್ಯಕ್ಷತೆ ವಹಿಸಿದ್ದರು. ಶ್ರೀ ಶ್ರೀಕಂಠಯ್ಯ ಮತ್ತಿತರರು ಮಾತನಾಡಿದರು. ಈ ಸಂದರ್ಭದಲ್ಲಿ ಶ್ರೀಯವರ ಭಾವಚಿತ್ರ ಅನಾವರಣ ಮಾಡಲಾಯಿತು. ಸಂಘ ಪ್ರತಿಷ್ಠಾನದ ಶ್ರೀ ಭವನ ನಿಧಿಗೆ ಕಾಣಿಕೆಯನ್ನು ಅರ್ಪಿಸಿತು. ಕಾರ್ಯದರ್ಶಿ ಮೋಹನ್ ವಿ. ಧಾರೇಶ್ವರ ಅವರು ಕಾರ್ಯಕ್ರಮ ನಡೆಸಿಕೊಟ್ಟರು. ಶ್ರೀ ಎಸ್. ಆರ್. ಸುಬ್ಬರಾವ್ ಅವರ ನೆರವಿನಿಂದ ಈ ಕಾರ್ಯಕ್ರಮ ವ್ಯವಸ್ಥೆಯಾಗಿತ್ತು.

**ಉತ್ತರ ಪ್ರದೇಶ**

**ಭಾರತದ ರಾಜಧಾನಿಯಲ್ಲಿ ಬಿ.ಎಂ.ಶ್ರೀ. ವಿಚಾರಗೋಷ್ಠಿ**

**ಸಾಹಿತ್ಯ ಅಕಾಡೆಮಿ, ನವದೆಹಲಿ:** ದಿನಾಂಕ 26, 27 ಆಗಸ್ಟ್ 1984 ರಂದು ಸಾಹಿತ್ಯ ಅಕಾಡೆಮಿ ಮತ್ತು ಬಿ. ಎಂ. ಶ್ರೀ. ಸ್ಮಾರಕ ಪ್ರತಿಷ್ಠಾನಗಳ ಸಹಯೋಗದಲ್ಲಿ ದೆಹಲಿಯಲ್ಲಿ ಇಂಟರ್‌ನ್ಯಾಷನಲ್ ಸೆಂಟರ್‌ನಲ್ಲಿ ಬಿ.ಎಂ.ಶ್ರೀ. ಯವರೊಂದಿಗೆ ಕೈಲಾಸಂ ಮತ್ತು ಹುಯಿಲಗೋಳರ ಜನ್ಮಶತಮಾನೋತ್ಸವ ಕಾರ್ಯಕ್ರಮ ಬಹಳ ವಿಜೃಂಭಣೆಯಿಂದ ನಡೆಯಿತು.

ರಾಜಧಾನಿ ದೆಹಲಿಯಲ್ಲಿ ಶ್ರೀಯವರನ್ನು ಸ್ಮರಿಸಲು, ರಾಷ್ಟ್ರೀಯ ಮಟ್ಟದಲ್ಲಿ ಕನ್ನಡೇತರರಿಗೂ ಶ್ರೀಯವರನ್ನು ಪರಿಚಯಿಸಲು ನೆರವು ನೀಡಿದ ಅಕಡೆಮಿಯ ಅಧ್ಯಕ್ಷರೂ, ಸತ್ಯಸಾಯಿ ವಿಶ್ವವಿದ್ಯಾಲಯದ ಕುಲಪತಿಗಳೂ, ಕನ್ನಡದ ಹೆಸರಾಂತ ಕವಿಗಳೂ ಆದ ಪ್ರೊ॥ ವಿ. ಕೃ. ಗೋಕಾಕ್ ಮತ್ತು ಅಕಡೆಮಿಯ ಕಾರ್ಯದರ್ಶಿಗಳಾದ ಪ್ರೊ॥ ಇಂದಿರಾನಾಥ ಚೌಧುರಿ ಅವರಿಗೂ ಪ್ರತಿಷ್ಠಾನ ಕೃತಜ್ಞವಾಗಿದೆ.

## ಉದ್ಘಾಟನಾ ಸಮಾರಂಭ

ದಿನಾಂಕ 26–8–84ರಂದು ಬೆಳಗ್ಗೆ ನಡೆದ ಉದ್ಘಾಟನಾ ಸಮಾರಂಭದಲ್ಲಿ ಕರ್ನಾಟಕದ ಕೇಂದ್ರ ಸಚಿವರುಗಳಾದ ಶ್ರೀ ಎಸ್. ಎಂ. ಕೃಷ್ಣ, ಶ್ರೀ ವೀರೇಂದ್ರ ಪಾಟೀಲ್ ಅವರುಗಳು ಭಾಗವಹಿಸಿದ್ದರು. ಬಿ.ಎಂ.ಶ್ರೀ.ಯವರ ಅಂಚೆಚೀಟಿಯನ್ನು ಹೊರಡಿಸಲು ನಾವು ಶಕ್ತಿಮೀರಿ ಪ್ರಯತ್ನಿಸುವುದಾಗಿ ಅವರುಗಳು ನುಡಿದರು. ಪ್ರೊ॥ ವಿ. ಕೃ. ಗೋಕಾಕ್ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ॥ ಇಂದಿರಾನಾಥ ಚೌಧುರಿ ಅವರು ಸ್ವಾಗತಿಸಿದರು. ಪ್ರೊ॥ ಎಂ.ವಿ.ಸೀ. ಅವರು ಶ್ರೀ ಶತಮಾನೋತ್ಸವದ ಯೋಜನೆಗಳನ್ನೂ, ಶ್ರೀ ಪ್ರತಿಷ್ಠಾನದ ಪರಿಚಯವನ್ನೂ ಮಾಡಿಕೊಟ್ಟರು. ಶ್ರೀ. ಶಾ. ಬಾಲೂರಾವ್ ಅವರು ವಂದನಾರ್ಪಣೆ ಮಾಡಿದರು. ಆಹ್ವಾನಿತರಲ್ಲದೆ ಇನ್ನೂ ಅನೇಕ ಜನ ಅಭಿಮಾನಿಗಳು, ಸಾರ್ವಜನಿಕರು ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು.

## ಗೋಷ್ಠಿ ಕಾರ್ಯಕ್ರಮಗಳು

ನಂತರ ನಡೆದ ಮೊದಲನೇ ಗೋಷ್ಠಿಯಲ್ಲಿ ಪ್ರೊ॥ ಎಂ.ವಿ.ಸೀ. ಅವರ ಅಧ್ಯಕ್ಷತೆಯಲ್ಲಿ ಶ್ರೀ ಕೆ. ನರಸಿಂಹಮೂರ್ತಿ. ಡಾ॥ ಹಾ. ಮಾ. ನಾಯಕ, ಡಾ॥ ರಾ. ಯ. ಧಾರವಾಡಕರ ಅವರುಗಳು ಕ್ರಮವಾಗಿ ಬಿ. ಎಂ. ಶ್ರೀ., ಕೈಲಾಸಂ, ಪಂಜೆಮಂಗೇಶ ನಾರಾಯಣರಾವ್ ಅವರುಗಳು ಸಾಹಿತ್ಯಕ್ಕೆ ನೀಡಿದ ಕೊಡುಗೆಯನ್ನು ಕುರಿತು ಮಾತನಾಡಿದರು.

ಅದೇ ದಿನ ಮಧ್ಯಾಹ್ನ ನಡೆದ ಎರಡನೇ ಗೋಷ್ಠಿಯಲ್ಲಿ ಡಾ॥ ರಾಮಚಂದ್ರ ಶರ್ಮ ಅವರು 'ಶ್ರೀಯವರ ಇಂಗ್ಲಿಷ್ ಗೀತಗಳು–ಟ್ರಾನ್ಸ್‌ಕ್ರಿಯೇಷನ್' ಎಂಬ ವಿಷಯವಾಗಿಯೂ, ಡಾ॥ ಶ್ರೀನಿವಾಸ ಹಾವನೂರ್ ಅವರು 'ಕೈಲಾಸಂ ನಾಟಕದ ಭಾಷೆ'ಯನ್ನು ಕುರಿತೂ ಮಾತನಾಡಿದರು. ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಅಧ್ಯಕ್ಷತೆ ವಹಿಸಿದ್ದರು.

ಮಾರನೇ ದಿನ 27–8–84ರಂದು ಬೆಳಗ್ಗೆ ನಡೆದ ಮೂರನೇ ಗೋಷ್ಠಿಯ ಅಧ್ಯಕ್ಷತೆಯನ್ನು ಡಾ॥ ಹಾ. ಮಾ. ನಾಯಕ ಅವರು ವಹಿಸಿದ್ದರು. ಬಿ.ಎಂ.ಶ್ರೀ.ಯವರ ಸ್ವತಂತ್ರ ಕವನಗಳನ್ನು ಕುರಿತು ಪ್ರೊ॥ ಎಂ. ವಿ. ಸೀ. ಅವರೂ, ಕೈಲಾಸಂ ಅವರ ಇಂಗ್ಲಿಷ್ ನಾಟಕ ಮತ್ತು ಕವನಗಳನ್ನು ಕುರಿತು ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಅವರೂ, ಬಿ.ಎಂ.ಶ್ರೀ. ಅವರ ಭಾಷಣಗಳನ್ನು ಕುರಿತು ಡಾ॥ ಎಚ್. ಎ. ರಾಮಕೃಷ್ಣ ಅವರೂ ಪ್ರಬಂಧಗಳನ್ನು ಮಂಡಿಸಿದರು.

ಮಧ್ಯಾಹ್ನದ ನಾಲ್ಕನೇ ಗೋಷ್ಠಿಯಲ್ಲಿ ಪ್ರೊ॥ ವಿ. ಕೃ. ಗೋಕಾಕ್ ಅವರ ಅಧ್ಯಕ್ಷತೆಯಲ್ಲಿ ಪ್ರೊ॥ ಸಿ. ಪಿ. ಕೃಷ್ಣಕುಮಾರ್, ಶ್ರೀ ಪ್ರಧಾನ ಗುರುದತ್ ಮತ್ತು ಶ್ರೀ ಗಿರಡ್ಡಿ ಗೋವಿಂದರಾಜು ಅವರುಗಳು ಕ್ರಮವಾಗಿ 'ಕೈಲಾಸಂ ಅವರ ಸಾಮಾಜಿಕ

ನಾಟಕಗಳು', 'ಸರ್ವೋದಯ ಕಾವ್ಯದ ಅನುವಾದಕರಾಗಿ ಬಿ. ಎಂ. ಶ್ರೀ.', 'ಬಿ.ಎಂ.ಶ್ರೀ.ಯವರ ಅಶ್ವತ್ಥಾಮನ್ ನಾಟಕದ ಭಾಷೆ' ಎಂಬ ವಿಷಯಗಳನ್ನು ಕುರಿತು ಮಾತನಾಡಿದರು.

## ಸಮಾರೋಪ

ಈ ಗೋಷ್ಠಿಯ ನಂತರ ನಡೆದ ಸಮಾರೋಪ ಸಮಾರಂಭದಲ್ಲಿ ಸಮಾರೋಪ ಭಾಷಣ ಮಾಡಿದ ಗೋಕಾಕ್ ಅವರು ಪ್ರತಿಷ್ಠಾನದ ಬಗ್ಗೆ ಮೆಚ್ಚುಗೆಯ ಮಾತುಗಳನ್ನಾಡಿದರು, ಇಂದಿರಾನಾಥ ಚೌಧುರಿ ಅವರು ವಂದನಾರ್ಪಣೆ ಮಾಡಿದರು. ಬಿ.ಎಂ.ಶ್ರೀ.ಯವರ ಗೀತೆಗಳು ಮತ್ತು ಕೈಲಾಸಂ ನಾಟಕಗಳ - ದೃಶ್ಯಭಾಗಗಳ ಅಭಿನಯವನ್ನು ಕಾರ್ಯಕ್ರಮಗಳ ನಡುವೆ ಎರಡೂ ದಿನ ಏರ್ಪಡಿಸಿತ್ತು. ಗೋಷ್ಠಿ ಕಾರ್ಯಕ್ರಮಗಳಲ್ಲೂ ಹೆಚ್ಚಿನ ಸಂಖ್ಯೆಯಲ್ಲಿ ಆಸಕ್ತರು ಭಾಗವಹಿಸಿ ಚರ್ಚೆಗಳನ್ನು ನಡೆಸುವುದರ ಮೂಲಕ ಮೂವರು ಕನ್ನಡದ ಪ್ರಮುಖರ ಸೇವೆಯನ್ನು ಮುಕ್ತ ಕಂಠದಿಂದ ಸ್ಮರಿಸಿದರು.

**ಕನ್ನಡ ವಿಭಾಗ, ಬನಾರಸ್ ಹಿಂದೂ ವಿಶ್ವವಿದ್ಯಾಲಯ, ಕಾಶಿ :** ದೆಹಲಿಯ ಕಾರ್ಯಕ್ರಮಕ್ಕಾಗಿ ಬಂದಿದ್ದ ಪ್ರೊ॥ ಎಲ್. ಎಸ್. ಶೇಷಗಿರಿರಾವ್ ಮತ್ತು ಡಾ॥ ರಾಮಚಂದ್ರಶರ್ಮ ಅವರುಗಳನ್ನೊಳಗೊಂಡು ಪ್ರೊ॥ ಎಂ. ವಿ. ಸೀತಾರಾಮಯ್ಯನವರು ಇಲ್ಲಿ ನಡೆದ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಕನ್ನಡ ವಿಭಾಗದ ಮುಖ್ಯಸ್ಥರಾದ ಪ್ರೊ॥ ವಿ. ಶಿವಾನಂದ ಮತ್ತು ದಿ॥ ವಿ. ಸೀ. ಅವರ ಪುತ್ರರಾದ ಶ್ರೀ ವಿಶ್ವನಾಥ ಶರ್ಮ ಅವರುಗಳ ಸಹಕಾರದಿಂದ ಭಾರತದ ಅದರಲ್ಲೂ ಕರ್ನಾಟಕದ ಪುರಾಣ ಪ್ರಸಿದ್ಧ ಕ್ಷೇತ್ರವಾದ ವಾರಣಾಸಿಯಲ್ಲಿ ಪ್ರತಿಷ್ಠಾನ ಅಲ್ಲಿಯ ವಿಶ್ವವಿದ್ಯಾನಿಲಯದ ಸಹಕಾರದೊಂದಿಗೆ ದಿನಾಂಕ 29-8-1984ರಂದು ಬಿ.ಎಂ.ಶ್ರೀ. ಮತ್ತು ಟಿ. ಪಿ. ಕೈಲಾಸಂ ಅವರ ಜನ್ಮಶತಮಾನೋತ್ಸವ ಕಾರ್ಯಕ್ರಮವನ್ನು ನಡೆಸಿತು.

ಬಿ.ಎಚ್.ಯು.ನ ಉಪಕುಲಪತಿಗಳಾದ ಪ್ರೊ॥ ಇಕ್ಬಾಲ್ ನಾರಾಯಣ ಅವರು ಕಾರ್ಯಕ್ರಮವನ್ನು ಉದ್ಘಾಟಿಸಿದರು. ಇತಿಹಾಸ ವಿಭಾಗದ ಮುಖ್ಯಸ್ಥರಾದ ಶ್ರೀ ಆನಂದ ಕೃಷ್ಣ ಅವರು ಅಧ್ಯಕ್ಷತೆ ವಹಿಸಿದ್ದರು. ಪ್ರೊ॥ ವಿ. ಶಿವಾನಂದ ಅವರು ಸ್ವಾಗತ ಮತ್ತು ಪರಿಚಯ ಭಾಷಣ ಮಾಡಿದರು. ಅನಂತರ ನಡೆದ ಗೋಷ್ಠಿ ಕಾರ್ಯಕ್ರಮದಲ್ಲಿ ಪ್ರೊ॥ ಎಂ.ವಿ.ಸೀ. ಮತ್ತು ಡಾ॥ ರಾಮಚಂದ್ರಶರ್ಮ ಅವರುಗಳು ಬಿ.ಎಂ.ಶ್ರೀ.ಯವರ ಸೇವೆಯನ್ನು, ಪ್ರೊ॥ ಎಲ್. ಎಸ್. ಎಸ್. ಅವರು ಕೈಲಾಸಂ ಸೇವೆಯನ್ನು ಸ್ಮರಿಸಿದರು. 'ಕನ್ನಡ ಸಾಹಿತ್ಯಕ್ಕೆ ಹೊಸ ಸಂಪ್ರದಾಯದ ಮೆರುಗು' ಎಂಬ ವಿಷಯವನ್ನು ಕುರಿತು ಶ್ರೀ ಜಿ. ಆರ್. ಗುರುಮೂರ್ತಿ ಅವರು ಕನ್ನಡದಲ್ಲಿ ಭಾಷಣ ಮಾಡಿದರು.

ನಂತರ ನಡೆದ ಕಾರ್ಯಕ್ರಮ ಬಹಳ ವೈಶಿಷ್ಟ್ಯಪೂರ್ಣವಾಗಿತ್ತು. ಕಾಶಿಯಲ್ಲಿರುವ ಕನ್ನಡ ಬಾಂಧವರಿಂದ ವಿವಿಧ ರೀತಿಯ ಮನರಂಜನಾ ಕಾರ್ಯಕ್ರಮಗಳು ನಡೆದವು. ಸಂಗೀತ ವಿಭಾಗದ ಮುಖ್ಯಸ್ಥರಾದ ಶ್ರೀಮತಿ ಸರಯೂ ಸೋನಿ ಅವರು ತಮ್ಮ ವಿದ್ಯಾರ್ಥಿನಿಯರೊಂದಿಗೆ ಶ್ರೀಯವರ ಗೀತಗಳನ್ನು ಹಾಡಿದರು. ಜಿ. ಎಚ್. ಶಿವನೆ, ಎನ್.ಎಸ್.ಎಸ್. ರಾವ್ ಮತ್ತು ಇತರರು ಸೇರಿ 'ಗುಂಡೂ ಗುಳಿಗೆಗಳು' ಎಂಬ ಹೆಸರಿನಲ್ಲಿ ಕೈಲಾಸಂ ನಾಟಕಗಳ ಚುಟುಕಗಳನ್ನು ಅಭಿನಯಿಸಿದರು. ಶ್ರೀಮತಿ ಎಚ್. ಕೆ. ಕಮಲ ಅವರು 'ಕೋಳೀಕೆ ರಂಗ' ಹಾಡಿದರು. ಕಾನೂನು ವಿಭಾಗದ ಪ್ರಾಧ್ಯಾಪಕರಾದ ಸಂಪತ್ ಅವರು ವಂದನಾರ್ಪಣೆ ಮಾಡಿದರು. ಕಾಶಿಯ ಕನ್ನಡಿಗರು ಮತ್ತು ವಿಶ್ವವಿದ್ಯಾಲಯದ ವಿವಿಧ ವಿಭಾಗದ ಅಧ್ಯಾಪಕ-ವಿದ್ಯಾರ್ಥಿಗಳು ಮತ್ತು ಸಾರ್ವಜನಿಕರು ಕಾರ್ಯಕ್ರಮದಲ್ಲಿ ಭಾಗವಹಿಸಿದರು.

**ಕೇರಳ**

**ನವಜೀವನ ಹೈಸ್ಕೂಲ್, ಪೆರಡಾಲ :** ಗೋವಿಂದ ಪೈ ಅವರ ತವರೂರೂ, ಕರ್ನಾಟಕಕ್ಕೆ ಸೇರಬೇಕಾದ ಗಡಿನಾಡೂ ಆದ ಕಾಸರಗೋಡಿನಲ್ಲಿ ಅಲ್ಲಿನ ಪ್ರತಿಷ್ಠಿತ ಕನ್ನಡ ಸಾಹಿತಿಗಳಾದ ವಿದ್ವಾನ್ ಕಯ್ಯಾರ ಕಿಞ್ಞಣ್ಣ ರೈ ಅವರ ಸಹಕಾರದಿಂದ ಪ್ರತಿಷ್ಠಾನ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮಗಳನ್ನು ನಡೆಸಿತು.

ಪೆರಡಾಲದ ಸಾಹಿತ್ಯ ಸಂಘ, ಲಯನ್ಸ್ ಕ್ಲಬ್ ಮತ್ತು ನವಜೀವನ ಹೈಸ್ಕೂಲುಗಳು ಈ ಕಾರ್ಯಕ್ರಮದಲ್ಲಿ ಸಹಭಾಗಿಗಳಾಗಿದ್ದವು. ಹೈಸ್ಕೂಲಿನ ಸಭಾಂಗಣದಲ್ಲಿ ದಿನಾಂಕ 24-9-84ರಂದು ನಡೆದ ಕಾರ್ಯಕ್ರಮದಲ್ಲಿ ಬೆಂಗಳೂರಿನಿಂದ ಪ್ರೊ॥ ಎಲ್. ಎಸ್. ಶೇಷಗಿರಿರಾವ್. ಡಾ॥ ರಾಮಚಂದ್ರಶರ್ಮ ಮತ್ತು ಪ್ರೊ॥ ಎಂ.ವಿ.ಸೀ. ಅವರು ಭಾಗವಹಿಸಿದ್ದರು. ಹೈಸ್ಕೂಲಿನ ಮುಖ್ಯೋಪಾಧ್ಯಾಯರಾದ ಶ್ರೀ ಟಿ. ವಿ. ಗೋವಿಂದಭಟ್ ಅತಿಥಿಗಳನ್ನು ಸ್ವಾಗತಿಸಿದರು. ಶ್ರೀ ಕಯ್ಯಾರ ಕಿಞ್ಞಣ್ಣ ರೈ ಅವರು ಅಧ್ಯಕ್ಷರಾಗಿದ್ದರು. ಸಾಹಿತ್ಯ ಸಂಘದ ಅಧ್ಯಕ್ಷರಾದ ಶ್ರೀ ಬಿ. ಕೃಷ್ಣಪ್ಪ, ಲಯನ್ಸ್ ಕ್ಲಬ್‌ನ ಅಧ್ಯಕ್ಷರಾದ ಎ. ಎನ್. ಹೆಬ್ಬಾರ್ ಅವರೂ ಉಪಸ್ಥಿತರಿದ್ದರು. ಪ್ರಾರಂಭದಲ್ಲಿ ಶಾಲಾ ಬಾಲಕರಿಂದ ಶ್ರೀಯವರ ಗೀತೆಗಳ ವಾಚನ ನಡೆಯಿತು.

**ಲಲಿತಕಲಾ ಸದನ, ಕಾಸರಗೋಡು :** ಪೆರಡಾಲದ ಕಾರ್ಯಕ್ರಮ ಮುಗಿಸಿಕೊಂಡು ಬಂದ ಅತಿಥಿಗಳು ಅಂದೇ ಸಂಜೆ (24-9-84) ನಡೆದ ಈ ಕಾರ್ಯಕ್ರಮದಲ್ಲಿ ಭಾಗವಹಿಸಿದ್ದರು. ಪ್ರತಿಷ್ಠಾನದ ಸಂಯುಕ್ತಾಶ್ರಯದಲ್ಲಿ ನಡೆದ ಈ ಕಾರ್ಯಕ್ರಮಕ್ಕೆ ಲಲಿತಕಲಾ ಸದನದ ಅಧ್ಯಕ್ಷರಾದ ಶ್ರೀ ವೈ. ಎಸ್. ವಿ. ಭಟ್ಟ ಅವರು ಸ್ವಾಗತ ಕೋರಿದರು. ಕಾರ್ಯದರ್ಶಿ ಶ್ರೀ ಕೆ. ಶಿವರಾಮಶೆಟ್ಟಿ ಅವರು ನಿರ್ವಹಿಸಿಕೊಟ್ಟರು. ಶ್ರೀ ಕಯ್ಯಾರ ಕಿಞ್ಞಣ್ಣ ರೈ ಅವರು ಈ ಕಾರ್ಯಕ್ರಮಕ್ಕೆ ಅಧ್ಯಕ್ಷರಾಗಿದ್ದರು.

ಸದನದ ಸಭಾಭವನದಲ್ಲಿ ನಡೆದ ಈ ಕಾರ್ಯಕ್ರಮದ ನಂತರ ಸದನದ ಕಲಾವಿದರು ಶ್ರೀ ಟಿ. ಆರ್. ನಾಗೇಶ್ ಅವರ ನಿರ್ದೇಶನದಲ್ಲಿ ಶ್ರೀರಂಗರ 'ನೀ ಮಾಯೆ ಯೊಳಗೋ ನಿನ್ನೊಳು ಮಾಯೆಯೋ' ನಾಟಕ ಅಭಿನಯಿಸಿದರು.

ಮಾರನೇ ದಿನ (25-4-84) ಶ್ರೀ ಕೀಕಾನ ರಾಮಚಂದ್ರ ಅವರ ಅಧ್ಯಕ್ಷತೆ ಯಲ್ಲಿ ಸದನ ಶ್ರೀ ಎಂ. ಎನ್. ಕಾಮತ್ ಅವರ ಜನ್ಮಶತಮಾನೋತ್ಸವವನ್ನು ನಡೆಸಿತು.

**ಗುಜರಾತ್**

**ಕರ್ನಾಟಕ ಸಂಘ, ಅಹಮದಾಬಾದ್ :** ಬಿ.ಎಂ.ಶ್ರೀ. ಪ್ರತಿಷ್ಠಾನ, ಕರ್ನಾಟಕ ಸಂಘ-ಅಹಮದಾಬಾದ್ ಮತ್ತು ಕನ್ನಡ ಸಂಸ್ಕೃತಿ ಇಲಾಖೆ-ಬೆಂಗಳೂರು ಇವುಗಳ ಸಂಯುಕ್ತಾಶ್ರಯದಲ್ಲಿ 6-4-1985ರಂದು ಇಲ್ಲಿನ ದಿನೇಶ್ ಹಾಲ್‌ನಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮ ನಡೆಯಿತು.

ಶ್ರೀ ಟಿ. ಎನ್. ರಾಜ ಅವರ ಸ್ವಾಗತದ ನಂತರ ವೆಂಕಟೇಶಮೂರ್ತಿ ಪರಿಚಯ ಮಾಡಿಕೊಟ್ಟರು. ಸಂಘದ ಅಧ್ಯಕ್ಷರಾದ ಶ್ರೀಮತಿ ಸೀತಾ ಶ್ರೀನಿವಾಸನ್ ಅವರು ಪ್ರತಿಷ್ಠಾನದ 'ಶ್ರೀ ಭವನಕ್ಕೆ' ಕಾಣಿಕೆ ನೀಡಿದರು. ಪ್ರತಿಷ್ಠಾನದ ಉಪಾಧ್ಯಕ್ಷರಾದ ಪ್ರೊ|| ಎಂ.ವಿ.ಸೀ. ಅವರು ಮಾತನಾಡಿದ ನಂತರ ಶ್ರೀ ನಾ. ಗೀತಾಚಾರ್ಯ ಅವರು ಪ್ರತಿಷ್ಠಾನದ ಪರಿಚಯ ಮಾಡಿಕೊಟ್ಟರು. ನಂತರ ಕನ್ನಡ ಸಂಸ್ಕೃತಿ ಇಲಾಖೆಯ ನೆರವಿನಿಂದ ಆಗಮಿಸಿದ್ದ ಖ್ಯಾತ ಗಾಯಕ ಶ್ರೀ ಶಿವಮೊಗ್ಗ ಸುಬ್ಬಣ್ಣ ಅವರು ತಮ್ಮ ತಂಡದೊಂದಿಗೆ ಕನ್ನಡ ಭಾವಗೀತೆಗಳನ್ನು ಹಾಡಿದರು. ಶ್ರೀ ನಾಗಪತಿ ವೆಂಕಟ ರಮಣಭಟ್ಟ ಅವರು ವಂದಿಸಿದರು.

**ಕರ್ನಾಟಕ ಸಂಘ, ಬರೋಡ :** ದಿನಾಂಕ 8-4-1985ರಂದು ನಗರದ ಮಹಾರಾಜ ಸಯ್ಯಾಜಿರಾವ್ ವಿಶ್ವವಿದ್ಯಾಲಯದ ಹೋಂ ಸೈನ್ಸ್ ಆಡಿಟೋರಿಯಂ ನಲ್ಲಿ ನಡೆದ ಈ ಕಾರ್ಯಕ್ರಮದಲ್ಲೂ ಪ್ರೊ|| ಎಂ. ವಿ. ಸೀತಾರಾಮಯ್ಯನವರು ಮತ್ತು ಶ್ರೀ ನಾ. ಗೀತಾಚಾರ್ಯ ಅವರು ಭಾಗವಹಿಸಿದ್ದರು. ಪ್ರತಿಷ್ಠಾನ, ಕರ್ನಾಟಕ ಸಂಘ ಮತ್ತು ಕನ್ನಡ ಸಂಸ್ಕೃತಿ ಇಲಾಖೆ ಈ ಮೂರೂ ಸಂಸ್ಥೆಗಳು ಜೊತೆಯಾಗಿ ನಡೆಸಿದ ಈ ಬಿ.ಎಂ.ಶ್ರೀ. ಕಾರ್ಯಕ್ರಮಕ್ಕೆ ಶ್ರೀ ಎಸ್. ಜಿ. ವಾಸುದೇವರಾವ್ ಅವರು ಸ್ವಾಗತ ಕೋರಿದರು. ಶ್ರೀ ಸಂಜೀವ ಅವರು ಕಾರ್ಯಕ್ರಮವನ್ನು ನಡೆಸಿಕೊಟ್ಟರು. ಸಂಘದ ಅಧ್ಯಕ್ಷರಾದ ಶ್ರೀ ಅರವಿಂದ ಗೋಪಾಲ ಕುಲಕರ್ಣಿ ಅವರು ಪ್ರತಿಷ್ಠಾನಕ್ಕೆ ಕಿರುಕಾಣಿಕೆ ಅರ್ಪಿಸಿದರು. ಶ್ರೀ ಶಿವಮೊಗ್ಗ ಸುಬ್ಬಣ್ಣ ಅವರೂ ಈ ಕಾರ್ಯಕ್ರಮದಲ್ಲಿ ಭಾಗವಹಿಸಿ ಸಭಿಕರನ್ನು ರಂಜಿಸಿದರು. ಶ್ರೀ ರವೀಂದ್ರನಾಥ್ ಅವರು ವಂದಿಸಿದರು.

ಈ ಎರಡೂ ಕಾರ್ಯಕ್ರಮಗಳ ವ್ಯವಸ್ಥೆಗೆ ಶ್ರೀ ಎಂ. ಎಸ್. ರಾಮಪ್ರಸಾದ್ ಅವರು ಪ್ರತಿಷ್ಠಾನದೊಂದಿಗೆ ವಿಶೇಷವಾಗಿ ಸಹಕರಿಸಿದ್ದಾರೆ.

[ಈ ಎರಡೂ ಕಾರ್ಯಕ್ರಮಗಳು ಸಮಾರೋಪ ಸಮಾರಂಭದ ನಂತರ ನಡೆದರೂ, ವಾಸ್ತವವಾಗಿ ನವೆಂಬರ್ 1984ರಲ್ಲೇ ನಡೆಯಬೇಕಾಗಿದ್ದವುಗಳು. ಶ್ರೀಮತಿ ಇಂದಿರಾಗಾಂಧಿ ಅವರ ನಿಧನ, ಲೋಕಸಭಾ ಚುನಾವಣೆ ಇತ್ಯಾದಿ ಕಾರಣಗಳಿಂದ ಇವು ಮುಂದೂಡಲ್ಪಟ್ಟಿದ್ದವು. ಈ ಕಾರಣದಿಂದಲೇ ಇನ್ನು ಕೆಲವು ಜಿಲ್ಲೆಗಳಲ್ಲಿ ನಡೆಯಬೇಕಾಗಿದ್ದ ಕಾರ್ಯಕ್ರಮಗಳು ನಿಂತುಹೋದವು.]

## ಇತರ ಉದ್ದೇಶಿತ ಕಾರ್ಯಕ್ರಮಗಳು

ಪ್ರತಿಷ್ಠಾನ ಇಡೀ ವರ್ಷ ನಾಡಿನ, ಹೊರನಾಡಿನ ಮತ್ತು ನಗರದ ವಿವಿಧ ಭಾಗಗಳಲ್ಲಿ ನಡೆಸಿದ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮಗಳ ಜೊತೆಗೆ ಇನ್ನು ಕೆಲವು ರಚನಾತ್ಮಕ ಕಾರ್ಯಕ್ರಮಗಳನ್ನು ಹಮ್ಮಿಕೊಂಡಿತ್ತು.

1) ಬಿ.ಎಂ.ಶ್ರೀ.ಯವರ ಜೀವನ-ಸಾಧನೆಯನ್ನು ಕುರಿತ **ಸಾಮಾನ್ಯ ಮತ್ತು ಪ್ರೌಢ ಗ್ರಂಥಗಳ ಪ್ರಕಟನೆ.** ಈ ಸಂಬಂಧದಲ್ಲಿ ಸುಮಾರು 10 ಪುಸ್ತಕಗಳನ್ನು ಪ್ರಕಟಿಸಲಾಯಿತು. (ರಕ್ಷಾಪುಟ ನೋಡಿ)

2) **ಬಿ. ಎಂ. ಶ್ರೀ. ಯವರ ಭಾವಚಿತ್ರ**ವನ್ನು ವರ್ಣದಲ್ಲಿ ಪ್ರಕಟಿಸಬೇಕೆಂಬ ಯೋಜನೆಯಿದ್ದರೂ ಸಾಧ್ಯವಾಗದೆ ಕಪ್ಪುಬಿಳುಪಿನ ಚಿತ್ರವನ್ನು ಪ್ರಕಟಿಸಿ ಅಗ್ಗದ ಬೆಲೆಗೆ ಮಾರಾಟ ಮಾಡಲಾಯಿತು.

3) ಶ್ರೀಯವರ ಭಾವಚಿತ್ರವಿರುವ ಅಂಚೆಚೀಟಿಯನ್ನು ಪ್ರಕಟಿಸಲು ಶ್ರಮಪಟ್ಟರೂ ಸಾಧ್ಯವಾಗದಿದ್ದರೂ 3-1-1984ರ ಉದ್ಘಾಟನಾ ಸಮಾರಂಭದಂದೇ **ಫಸ್ಟ್ ಡೇ ಕವರ್ ಮತ್ತು ಕ್ಯಾನ್ಸಲೇಷನ್**ಅನ್ನು ಶ್ರೀ ಪಿ.ಟಿ.ಎಸ್. ರಾವ್ ಮತ್ತು ಅಂಚೆ ಇಲಾಖೆಯವರ ಕೃಪೆಯಿಂದ ಪ್ರಕಟಿಸಲಾಯಿತು.

4) ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ನೆನಪಿಗಾಗಿ ವಿದ್ಯಾರ್ಥಿಗಳಿಗೆಲ್ಲಾ ಶ್ರೀಯವರ ಪರಿಚಯ ಮಾಡುವ ಸಲುವಾಗಿ ರಾಜ್ಯಮಟ್ಟದ **ಪ್ರಬಂಧ ಸ್ಪರ್ಧೆ**ಯನ್ನು ವ್ಯವಸ್ಥೆ ಮಾಡಿತ್ತು. ಪ್ರೌಢಶಾಲೆ ಮತ್ತು ಕಾಲೇಜುಗಳಿಗೆ ಪ್ರತ್ಯೇಕವಾಗಿ ವಿಷಯ ಸೂಚಿಸಿ ಬಹುಮಾನಗಳನ್ನು ನಿಗದಿ ಮಾಡಿತ್ತು. ಎರಡೂ ವಿಭಾಗಗಳಿಗೆ ಕರ್ನಾಟಕದ ವಿವಿಧ ಭಾಗಗಳಿಂದ ಸುಮಾರು ಮುನ್ನೂರು ಜನ ವಿದ್ಯಾರ್ಥಿಗಳು ಭಾಗವಹಿಸಿದ್ದರು. ಪ್ರತಿ ವಿಭಾಗದಲ್ಲಿ ಹತ್ತು ಸಮಾಧಾನಕರ ಬಹುಮಾನ ಮತ್ತು ಮೂರು ಬಹುಮಾನಗಳನ್ನು ನೀಡಲಾಯಿತು. ದಿನಾಂಕ 23-2-85 ರಂದು ನಡೆದ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಮಾರೋಪ ಸಮಾರಂಭದಲ್ಲಿ ಈ ಬಹುಮಾನಗಳನ್ನು ಮತ್ತು ಪ್ರಶಸ್ತಿ ಪತ್ರಗಳನ್ನು ನೀಡಲಾಯಿತು. ಬಹುಮಾನದ ಮೊತ್ತದಲ್ಲಿ ಅರ್ಧ ಭಾಗ ಶ್ರೀಯವರ ಸಾಹಿತ್ಯ ಕೃತಿಗಳ ರೂಪದಲ್ಲಿತ್ತು.

ಪ್ರೊ|| ಎಲ್. ಎಸ್. ಶೇಷಗಿರಿರಾವ್ ಮತ್ತು ಜಿ. ವೆಂಕಟಸುಬ್ಬಯ್ಯ ಅವರುಗಳು ವಿಷಯಗಳನ್ನು ಸೂಚಿಸಿದ್ದರು. ಶ್ರೀಯುತರಾದ ಕ. ನಂ. ನಾಗರಾಜ, ಎಚ್. ಎಸ್. ರಾಘವೇಂದ್ರರಾವ್, ಅನಂತಪದ್ಮನಾಭರಾವ್, ಕೆ. ರಾಜಾರಾವ್, ಎನ್. ಎಸ್. ರಾಮಸ್ವಾಮಿ ಅಯ್ಯರ್ ಮತ್ತು ಆರ್. ಎಸ್. ರಾಮರಾವ್ ಅವರುಗಳು ತೀರ್ಪುಗಾರರಾಗಿದ್ದರು. ಈ ಮಹನೀಯರಿಗೆ ಪ್ರತಿಷ್ಠಾನ ಕೃತಜ್ಞವಾಗಿದೆ.

### ಬಿ.ಎಂ.ಶ್ರೀ. ಪ್ರಬಂಧ ಸ್ಪರ್ಧೆ :–ಕಾಲೇಜು ವಿಭಾಗ

ವಿಷಯ : 1. ಕನ್ನಡದ ಏಳ್ಗೆಗೆ ಶ್ರೀಯವರು ತೋರಿದ ದಾರಿ
2. ಆಧುನಿಕ ಕಾವ್ಯದ ಚರಿತ್ರೆಯಲ್ಲಿ ಇಂಗ್ಲಿಷ್ ಗೀತಗಳ ಮಹತ್ವ
3. ಅಶ್ವತ್ಥಾಮನ್ ನಾಟಕದಲ್ಲಿ ಮಾನವ ಮತ್ತು ದೈವ

ಬಹುಮಾನ : ಪ್ರಥಮ : ರೂ. 300 ; ದ್ವಿ : ರೂ. 250 ; ತೃ : ರೂ. 200.

ವಿಜೇತರು :

ಪ್ರಥಮ : ಬಿ. ವಿ. ಸತ್ಯೇಂದ್ರರಾವ್, 4ನೇ ಸೆಮಿಸ್ಟರ್,
ನ್ಯಾಷನಲ್ ಇನ್ಸ್‌ಟಿಟ್ಯೂಟ್ ಆಫ್ ಇಂಜನಿಯರಿಂಗ್, ಮೈಸೂರು.

ದ್ವಿತೀಯ : ವಿ. ಕೆ. ನಾಯಕ, 3ನೇ ಬಿ. ಎ.,
ಶ್ರೀ ಶಿವಬಸವಸ್ವಾಮೀಜಿ ನಾಗೂರ ಕಲಾ ಮತ್ತು ವಾಣಿಜ್ಯ ವಿದ್ಯಾಲಯ, ಹುಕ್ಕೇರಿ.

ತೃತೀಯ : ಕುಮಾರಿ ಜಿ. ಎಂ. ಖಡಖಡಿ, 2ನೇ ಬಿ.ಎ.,
ಶ್ರೀ ಶಿವಬಸವಸ್ವಾಮೀಜಿ ನಾಗೂರ ಕಲಾ ಮತ್ತು ವಾಣಿಜ್ಯ ವಿದ್ಯಾಲಯ, ಹುಕ್ಕೇರಿ.
ಮತ್ತು
ಜ್ಯೋತಿ ಬಿ. ನರೋಣಾ, 2ನೇ ಬಿ.ಎ.,
ಮಾತೋಶ್ರೀ ಗೋದೂತಾಯಿ ದೊಡ್ಡಪ್ಪ ಅಪ್ಪ ಕಲಾ ಮತ್ತು ವಾಣಿಜ್ಯ ಮಹಿಳಾ ವಿದ್ಯಾಲಯ, ಗುಲಬರ್ಗ.

ಸಮಾಧಾನ ಬಹುಮಾನಗಳು :

ಜಿ. ವಿಜಯಕುಮಾರಿ, 2ನೇ ಪಿ.ಯು.ಸಿ., ಸರ್ಕಾರಿ ಕಾಲೇಜು, ಮಡಕೇರಿ.
ಜಿ. ವಿಜಯಪ್ರಭಾ, ಬಿ.ಎಂ.ಎಸ್. ಕಾಲೇಜು, ಬೆಂಗಳೂರು.
ರಾಮಚಂದ್ರಭಟ್ಟ, 2ನೇ ಎಂ.ಎ., ಅರ್ಥಶಾಸ್ತ್ರ, ಮಾನಸಗಂಗೋತ್ರಿ, ಮೈಸೂರು.
ಬಿ. ಸಿ. ಚಂದ್ರಶೇಖರ್, 2ನೇ ಬಿ.ಎ., ಮಾ.ಸ.ಬ. ಸಂಜೆ ವಿದ್ಯಾಲಯ, ದಾವಣಗೆರೆ.
ಕಮಲಾ. ಮ. ಹಾದಿ, 3ನೇ ಬಿ.ಎ., ಕಿಟಲ್ ಕಾಲೇಜು, ದಾರವಾಡ.
ಸ್ವಾಮಿನಿ ನಾಗಜ್ಯೋತಿ, 2ನೇ ಬಿ.ಎಸ್ಸಿ., ಗ್ರಾಮಾಂತರ ಕಾಲೇಜು, ಕನಕಪುರ.
ಕುಮಾರಿ ಯು. ಎಂ. ಕತ್ತಿ, 2ನೇ ಬಿ.ಕಾಂ.,
ಶ್ರೀ ಶಿವಬಸವಸ್ವಾಮೀಜಿ ನಾಗೂರ ಕಲಾ ಮತ್ತು ವಾಣಿಜ್ಯ ಕಾಲೇಜು, ಹುಕ್ಕೇರಿ.
ಎಸ್. ಎನ್. ಪೂರ್ಣಾತ್ಮರಾಮ, 3ನೇ ಬಿ.ಎಸ್ಸಿ., ಸಂತ ಫಿಲೋಮಿನಾ ಕಾಲೇಜು, ಪುತ್ತೂರು.
ಎನ್. ಮಂಜುಳ, ಸರ್ಕಾರಿ ಕಿರಿಯ ಕಾಲೇಜು, ತುಮಕೂರು.
ಕೆ. ಶಿವಕುಮಾರ, 3ನೇ ಬಿ.ಎಸ್ಸಿ., ವಿಜಯನಗರ ಕಾಲೇಜು, ಬಳ್ಳಾರಿ.

## ಪ್ರೌಢಶಾಲೆ ವಿಭಾಗ

ವಿಷಯ : 1. ಬಿ.ಎಂ.ಶ್ರೀ. ಅವರ ಜೀವನ ಮತ್ತು ಕೃತಿಗಳು
2. ಅಶ್ವತ್ಥಾಮನ್ ಮತ್ತು ಗದಾಯುದ್ಧ ನಾಟಕದಲ್ಲಿ ಕೃಷ್ಣನ ಅಥವಾ ಏಕಲವ್ಯನ ಪಾತ್ರದ ವಿವರಣೆ
3. ಶ್ರೀ ಅವರ ಕನ್ನಡ ಸೇವೆ

ಬಹುಮಾನ : ಪ್ರಥಮ : ರೂ. 200 : ದ್ವಿ: ರೂ. 150 ; ತೃ: ರೂ. 100.

ವಿಜೇತರು :

ಪ್ರಥಮ : ಕೆ. ಎಸ್. ಸುಧೀಂದ್ರ, 9ನೇ ತರಗತಿ, ನ್ಯಾಷನಲ್ ಹೈಸ್ಕೂಲು, ಬೆಂಗಳೂರು.

ಮತ್ತು

ಸ. ಗ. ರವೀಂದ್ರ, ಹೊಳ್ಳ. 10ನೇ ತರಗತಿ, ನ್ಯಾಷನಲ್ ಹೈಸ್ಕೂಲು, ಬೆಂ.

ದ್ವಿತೀಯ : ಅನುರಾಧ. ವಿ. ಭಟ್. 10ನೇ 'ಬಿ' ತರಗತಿ. ಮಹಿಳಾ ಸೇವಾ ಸಮಾಜ, ಬೆಂ.

ತೃತೀಯ : ಮಂಜುನಾಥ ಎಚ್. ಎಂ., 10ನೇ 'ಎ' ತರಗತಿ, ನೆಹರು ಸ್ಮಾರಕ ವಿದ್ಯಾ ಕೇಂದ್ರ, ಬೆಂಗಳೂರು.

ಮತ್ತು

ಕೆ. ಎಚ್. ಸುಧಾ, 9ನೇ 'ಸಿ' ತರಗತಿ, ನ್ಯಾಷನಲ್ ಹೈಸ್ಕೂಲು, ಬೆಂಗಳೂರು.

ಸಮಾಧಾನ ಬಹುಮಾನಗಳು :

ಚಂದ್ರಿಕಾ, ಮೇಡಲೀನ್ ಬಾಲಕಿಯರ ಪ್ರೌಢಶಾಲೆ, ಮಂಗಳೂರು.
ಎಸ್. ವಾಣಿಶ್ರೀ, 9ನೇ 'ಸಿ' ತರಗತಿ, ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.
ಎನ್. ಸವಿತ, 10ನೇ ತರಗತಿ, 'ಸಿ' ವಿಭಾಗ, ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.
ಎಲ್. ಪ್ರಕಾಶ, 10ನೇ 'ಎ' ತರಗತಿ, ಕಾಗದನಗರ ಪ್ರೌಢಶಾಲೆ, ಭದ್ರಾವತಿ.
ಬಿ. ಎಸ್. ಭವಿಕಟ್ಟಿ, 9ನೇ 'ಸಿ' ತರಗತಿ, ಜೆ. ಪಿ. ಹೈಸ್ಕೂಲು, ಮುಂಡರಗಿ.
ಎಸ್. ಆರ್. ದತ್ತಾತ್ರಿ, 10ನೇ 'ಸಿ' ವಿಭಾಗ, ನ್ಯಾಷನಲ್ ಹೈಸ್ಕೂಲು, ಬೆಂಗಳೂರು.
ಶ್ರೀವತ್ಸ, ವಿಜಯ ಪ್ರೌಢಶಾಲೆ, ಬೆಂಗಳೂರು.
ಅಖಿಲ. ಎ. ನಾರಾಯಣ, 10ನೇ 'ಸಿ' ವಿಭಾಗ, ನ್ಯಾಷನಲ್ ಹೈಸ್ಕೂಲ್, ಬೆಂಗಳೂರು.
ಈರಣ್ಣ ಯಮನಪ್ಪ ಬೆಸಹಳ್ಳಿ, 10ನೇ 'ಸಿ' ತರಗತಿ, ಜೆ. ಎ. ಹೈಸ್ಕೂಲ್, ಮುಂಡರಗಿ.
ಬಿ. ವಿ. ಗುರುರಾಜರಾವ್, 10ನೇ 'ಬಿ' ತರಗತಿ, ಶಾರದಾವಿಲಾಸ ಬಾಲಕರ ಪ್ರೌಢಶಾಲೆ, ಮೈಸೂರು.

ಇದೇ ರೀತಿ ಮಂಗಳೂರಿನ ಕಾರ್ಯಕ್ರಮದಲ್ಲೂ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ನೆನಪಿಗಾಗಿ ಮಂಗಳೂರು ಜಿಲ್ಲಾ ಮಟ್ಟದಲ್ಲಿ ಪ್ರಬಂಧ ಸ್ಪರ್ಧೆಗಳನ್ನು ನಡೆಸಿ, ಬಹುಮಾನ ಮತ್ತು ಪ್ರಶಸ್ತಿಪತ್ರಗಳನ್ನು ನೀಡಲಾಯಿತು.

ನಾವು ಹಾಕಿಕೊಂಡಿದ್ದ ಯೋಜನೆಯಲ್ಲಿ ಇನ್ನೂ ಆಗದೆ ಉಳಿದ ಅನೇಕ ಕಾರ್ಯಕ್ರಮಗಳಿವೆ. ಶ್ರೀಯವರನ್ನು ಕುರಿತ **ಅಂಚೆಚೀಟಿ** ಮತ್ತು **ಸಾಕ್ಷ್ಯಚಿತ್ರ** ತಯಾರಿಕೆ, ಬೆಂಗಳೂರು ನಗರದಲ್ಲಿ ಒಂದು ಪ್ರಮುಖ **ರಸ್ತೆಗೆ ಶ್ರೀ ನಾಮಕರಣ**

ಇವುಗಳ ಬಗ್ಗೆ ನಾವು ಸಂಬಂಧಪಟ್ಟವರೊಂದಿಗೆ ವರ್ಷಾರಂಭದಿಂದಲೂ ವ್ಯವಹರಿಸು ತ್ತಿದ್ದರೂ ಇನ್ನೂ ಆಗುವುದರಲ್ಲೇ ಇದೆ. ಸಾಕ್ಷ್ಯಚಿತ್ರದ ಬಗ್ಗೆ ಮೊದಲು ಮನಸ್ಸು ಮಾಡಿದ್ದ ಸರ್ಕಾರ ಅನಂತರ ಸಾಧ್ಯವಾಗುವುದಿಲ್ಲ ಎಂದು ತಿಳಿಸಿದುದು ತುಂಬ ವಿಷಾದದ ಸಂಗತಿಯಾಗಿದೆ.

ಬೆಂಗಳೂರಿನಲ್ಲಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ನೆನಪಿಗಾಗಿ **ಶ್ರೀ ಸ್ಮಾರಕ ಭವನ**ವನ್ನು ನಿರ್ಮಿಸಲಾಗುವುದು. ಈ ಭವನದ ಕಟ್ಟಡಕ್ಕೆ ಸರ್ಕಾರವನ್ನು ನಿವೇಶನ ಕೇಳಿದ್ದು, ಅದು ದೊರೆತ ಕೂಡಲೆ ಈವರೆಗೆ ಸಂಗ್ರಹವಾಗಿರುವ ಕಟ್ಟಡನಿಧಿಯಿಂದ ಕಟ್ಟಡವನ್ನು ಪ್ರಾರಂಭಿಸಲಾಗುವುದು. ಇದರ ಜೊತೆಗೆ ಸರ್ಕಾರವೂ ಧನಸಹಾಯ ನೀಡುವ ಸಾಧ್ಯತೆಯಿದೆ. ಈ ಭವನದಲ್ಲಿ ಶ್ರೀಯವರ ಪ್ರತಿಮೆ, ಶ್ರೀಯವರ ಜೀವನ ಸಾಧನೆ ಕುರಿತ ಸ್ಥಿರ ಪ್ರದರ್ಶನ, ಸಭಾ ಭವನ, ಗ್ರಂಥಾಲಯ, ಸಂಶೋಧನಾ ಆಕರ ಗ್ರಂಥಾಲಯ ಇತ್ಯಾದಿ ಭಾಗಗಳಿರುತ್ತವೆ. ಒಂದು ವಿಶಿಷ್ಟ ರೀತಿಯಲ್ಲಿ ಇತರ ಸ್ಮಾರಕ ಭವನಗಳಿಗೆ ಮಾದರಿಯಾಗಿರುವಂತೆ ನಿರ್ಮಿಸುವ ಆಲೋಚನೆಯಿದೆ. ಇದೇ ರೀತಿ ಬೆಳ್ಳೂರು, ಸಂಪಿಗೆಗಳಲ್ಲೂ ಶ್ರೀ ಸ್ಮಾರಕಗಳಾಗುತ್ತವೆ.

ವಿಜಯನಗರದಲ್ಲಿ ನಡೆದ **ಮನೆಮನೆಗೆ ಶ್ರೀಸಾಹಿತ್ಯ ಪ್ರಸಾರ ಕಾರ್ಯ**ಕ್ರಮ ವನ್ನು ಇನ್ನೂ ಕೆಲವು ಕಡೆ ನಡೆಸಿ ಕಟ್ಟಡ ನಿಧಿಯ ಸಂಗ್ರಹನಿಧಿಗೆ ಆ ಹಣವನ್ನು ವಿನಿಯೋಗಿಸುವ ಆಲೋಚನೆಯಿದೆ. ಆಸಕ್ತರು ಮುಂದೆ ಬಂದು ಸಹಾಯ ನೀಡು ವುದಾದರೆ ಅಂತಹ ಕಡೆ ಕಾರ್ಯಕ್ರಮ ನಡೆಸಲಾಗುವುದು.

## ತೈಲ ವರ್ಣಚಿತ್ರ

ಮೈಸೂರಿನ ಖ್ಯಾತ ಕಲಾವಿದರಾದ ಶ್ರೀ ಎನ್. ಎಸ್. ಸುಬ್ಬುಕೃಷ್ಣರವರು ಬಿ.ಎಂ.ಶ್ರೀ.ಯವರ ಅಪರೂಪದ ಪೂರ್ಣಪ್ರಮಾಣದ ತೈಲ ವರ್ಣಚಿತ್ರವನ್ನು ಉಚಿತವಾಗಿ ಬರೆದುಕೊಟ್ಟಿದ್ದಾರೆ.

## ಕೃತಜ್ಞತಾ ಸಮಾರಂಭ

1984-85 ಇಡೀ ವರ್ಷ ನಡೆದ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಮಾರಂಭದಲ್ಲಿ ವಿವಿಧ ರೀತಿಯಲ್ಲಿ ಪ್ರತಿಷ್ಠಾನದೊಂದಿಗೆ ಸಹಕರಿಸಿದ ಮಹನೀಯ ರಿಗೆ ಪ್ರತಿಷ್ಠಾನ ಕೃತಜ್ಞತೆಗಳನ್ನು ಸಮರ್ಪಿಸುವ ಸಮಾರಂಭವೊಂದನ್ನು ದಿನಾಂಕ 23-5-1985ರಂದು ಗೋಖಲೆ ಸಾರ್ವಜನಿಕ ವಿಚಾರಸಂಸ್ಥೆಯಲ್ಲಿ ಏರ್ಪಡಿಸಾಗಿತ್ತು.

ಕನ್ನಡ ಸಂಸ್ಕೃತಿ ಇಲಾಖೆಯ ಶ್ರೀ ಐ. ಎಂ. ವಿಠ್ಠಲಮೂರ್ತಿ ಅವರು ಮುಖ್ಯ ಅತಿಥಿಗಳಾಗಿ ಶ್ರೀ ನಿಟ್ಟೂರು ಶ್ರೀನಿವಾಸರಾವ್ ಅವರು ಅಧ್ಯಕ್ಷರಾಗಿದ್ದರು. ಪ್ರೊ॥ ಎಂ.ವಿ.ಸೀ. ಅವರು ಸ್ವಾಗತ ಭಾಷಣ ಮಾಡುತ್ತ, ಪ್ರತಿಷ್ಠಾನದ ಆರ್ಥಿಕ ಕೊರತೆ ಯನ್ನು ಸಭೆಯ ಗಮನಕ್ಕೆ ತಂದರು.

ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಮಿತಿಯ ಕಾರ್ಯಾಧ್ಯಕ್ಷರಾಗಿ ಶಕ್ತಿಮೀರಿ ಶ್ರಮಿಸಿ, ನಾಡಿನಾದ್ಯಂತ ನಡೆದ ಬಿ.ಎಂ.ಶ್ರೀ. ಕಾರ್ಯಕ್ರಮಗಳ ಸಂಪೂರ್ಣ ಹೊಣೆಯನ್ನು ಹೊತ್ತು ಕಾರ್ಯಕ್ರಮದ ಯಶಸ್ಸಿಗೆ ಕಾರಣರಾದ ಶ್ರೀ ಜಿ. ನಾರಾಯಣ ಅವರಿಗೆ ಶ್ರೀಗಂಧದ ಸರಸ್ವತಿ ವಿಗ್ರಹವನ್ನು ನೀಡಿ ಗೌರವಿಸಲಾಯಿತು.

ಪುಸ್ತಕಗಳು ವೈವಿಧ್ಯಮಯವಾಗಿ, ಉತ್ತಮವಾಗಿ ಹೊರಬರಲು ವಿಶೇಷವಾಗಿ ಶ್ರಮಿಸಿದ ಶ್ರೀ ಸಂಸ್ಮರಣ ಸಂಪುಟಗಳ ಸಂಪಾದಕರುಗಳಿಗೆ ಮತ್ತು ಲೇಖನಗಳನ್ನು ಬರೆದುಕೊಟ್ಟು ಸಹಕರಿಸಿದ ಲೇಖಕರುಗಳಿಗೆ ಗೌರವ ಪ್ರತಿಗಳನ್ನೂ, ಅಲ್ಪ ಕಾಣಿಕೆಯನ್ನೂ ನೀಡಲಾಯಿತು. ಉತ್ಸವ ಸಮಿತಿಯ ಕಾರ್ಯದರ್ಶಿಗಳು, ಕಾರ್ಯಸಮಿತಿ ಸದಸ್ಯರು, ಪ್ರತಿಷ್ಠಾನದ ಗೌರವ, ಕಾರ್ಯಸಮಿತಿ ಸದಸ್ಯರುಗಳು, ಕಾರ್ಯಕರ್ತರು- ಹೀಗೆ ವಿವಿಧ ರೀತಿಯಲ್ಲಿ ನೆರವಾದ ಮಹನೀಯರಿಗೆ ಶ್ರೀ ಸಂಪುಟಗಳನ್ನು ನೀಡಲಾಯಿತು.

ಬಿ.ಎಂ.ಶ್ರೀ. ಕಾರ್ಯಕ್ರಮಗಳಿಗೆ ಪರೋಕ್ಷವಾಗಿ, ಪ್ರತ್ಯಕ್ಷವಾಗಿ ಸಹಾಯ ಮಾಡಿದ, ನೆರವು ನೀಡಿದ, ಮಹನೀಯರು, ಸಂಘಸಂಸ್ಥೆಗಳು ನೂರಾರು. ಈ ಎಲ್ಲರಿಗೂ ಕೃತಜ್ಞತೆಗಳನ್ನು ಅರ್ಪಿಸುತ್ತ ಔಪಚಾರಿಕವಾಗಿ ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಕಾರ್ಯಕ್ರಮಗಳನ್ನು ಮುಕ್ತಾಯ ಮಾಡಲಾಯಿತು.

ಹೀಗೆ ವೈವಿಧ್ಯಮಯವಾಗಿ ನಾಡಿನಾದ್ಯಂತ ನಡೆದ ಈ ಕಾರ್ಯಕ್ರಮಕ್ಕೆ ಒಟ್ಟು ಸುಮಾರು ಒಂದೂವರೆ ಲಕ್ಷ ರೂಪಾಯಿಗಳು ಖರ್ಚಾಗಿವೆ. ಅವುಗಳಲ್ಲಿ ಕರ್ನಾಟಕ ಸರ್ಕಾರ ಒಂದು ಲಕ್ಷ ರೂ.ಗಳನ್ನು ನೀಡಿದರೆ ಸುಮಾರು 8–10 ಸಾವಿರ ರೂ.ಗಳು ಮಾತ್ರ ಸಾರ್ವಜನಿಕರಿಂದ ಸಂಗ್ರಹವಾಗಿದೆ. ಉಳಿದ ಹಣವನ್ನು ಪ್ರತಿಷ್ಠಾನ ತನ್ನ ಪುಸ್ತಕಗಳ ಮಾರಾಟದಿಂದ ಸ್ವಲ್ಪ ಭಾಗವನ್ನು, ಸಾವಧಿ ಠೇವಣಿಗಳಿಂದ ಸ್ವಲ್ಪ ಭಾಗವನ್ನು (ಸಾಲ ರೂಪವಾಗಿ) ತೆಗೆದುಕೊಂಡು ಖರ್ಚು ಮಾಡಲಾಯಿತು.

---

# ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ—ಒಂದು ಸಮೀಕ್ಷೆ

3-1-1984ರಿಂದ ಶತಮಾನೋತ್ಸವ ಪ್ರಾರಂಭವಾದರೂ ಸಿದ್ಧತೆಗಾಗಿ ಜೂನ್ 1983ರಿಂದಲೇ ಪ್ರತಿಷ್ಠಾನ ಪತ್ರವ್ಯವಹಾರ ಆರಂಭಿಸಿತು. ಅದಕ್ಕೂ ಮುಂಚೆ ಮೈಸೂರು ವಿಶ್ವವಿದ್ಯಾನಿಲಯ ಶ್ರೀಯವರ ಸಮಗ್ರ ಕೃತಿಸಂಪುಟ 'ಶ್ರೀಸಾಹಿತ್ಯ'ವನ್ನು ಬಿಡುಗಡೆಮಾಡಿ ನಾಂದಿ ಹಾಡಿತು. ಅಲ್ಲಿಂದ 3-1-1985ಕ್ಕೆ ವರ್ಷ ಮುಕ್ತಾಯವಾದರೂ ಇನ್ನೂ ಆ ಸಂಬಂಧದ ಪತ್ರವ್ಯವಹಾರ ನಡೆಯುತ್ತಲೇ ಇದೆ. ಒಟ್ಟು ಸುಮಾರು **ಹತ್ತು ಸಾವಿರ** ಪತ್ರಗಳನ್ನು ಪ್ರತಿಷ್ಠಾನ ಈ ಸಂಬಂಧದಲ್ಲಿ ಬಟವಾಡೆ ಮಾಡಿದೆ ಮತ್ತು ಸುಮಾರು **ಎಂಟುನೂರು** ಪತ್ರಗಳು ಪ್ರತಿಷ್ಠಾನಕ್ಕೆ ಬಂದಿವೆ.

ಪ್ರತಿಷ್ಠಾನವೇ ನೇರವಾಗಿ ಸ್ಥಳೀಯ ಸಂಘ ಸಂಸ್ಥೆಗಳ ನೆರವಿನೊಂದಿಗೆ ಒಟ್ಟು 45 ಕಡೆ ಬಿ.ಎಂ.ಶ್ರೀ.ಯವರ ಕಾರ್ಯಕ್ರಮ ನಡೆಸಿದೆ. ಇದರಲ್ಲಿ ಬೆಂಗಳೂರಿನಲ್ಲಿ ಸು. 8 ಕಾರ್ಯಕ್ರಮ ಆಗಿದೆ. ಬೆಳ್ಳೂರು ಮತ್ತು ಸಂಪಿಗೆಗಳಲ್ಲೂ ಕಾರ್ಯಕ್ರಮ ನಡೆದಿವೆ. ಶ್ರೀಯವರ ಕಾರ್ಯಕ್ಷೇತ್ರವಾಗಿದ್ದ ಧಾರವಾಡ ಮತ್ತು ಮೈಸೂರು ಗಳಲ್ಲಿ ಬೇರೆ ಬೇರೆ ಸಂಘ ಸಂಸ್ಥೆಗಳು ಮೂರು ನಾಲ್ಕು ಬಾರಿ ಕಾರ್ಯಕ್ರಮಗಳನ್ನು ಮಾಡಿರುವುದರಿಂದ ಪ್ರತಿಷ್ಠಾನ ಆ ಎರಡು ಕಡೆ ಕಾರ್ಯಕ್ರಮ ನಡೆಸಲಿಲ್ಲ. ನವೆಂಬರ್‌ನಲ್ಲಿ ನಡೆದ ಕೆಲವು ಕಾರಣಗಳಿಂದ ಈ ಜಿಲ್ಲೆಗಳ ಜೊತೆಗೆ ಬಳ್ಳಾರಿ, ಚಿತ್ರದುರ್ಗ ಮತ್ತು ಬೆಳಗಾವಿಗಳಲ್ಲೂ ಕಾರ್ಯಕ್ರಮ ನಡೆಸಲಾಗಲಿಲ್ಲ. ಆದರೂ ಅಲ್ಲಿಲ್ಲಿ ಸ್ಥಳೀಯವಾಗಿ ಕಾರ್ಯಕ್ರಮಗಳು ನಡೆದಿವೆ. ಇತರ ಸಂಘ ಸಂಸ್ಥೆಗಳು ನಾಡು-ಹೊರನಾಡುಗಳಲ್ಲಿ ನಮಗೆ ತಿಳಿದಿರುವಂತೆ ಸುಮಾರು 60 ಬಿ.ಎಂ.ಶ್ರೀ. ಕಾರ್ಯಕ್ರಮಗಳನ್ನು ನಡೆಸಿವೆ (ಪ್ರತ್ಯೇಕವಾಗಿ ಪಟ್ಟಿ ಕೊಟ್ಟಿದೆ). ಇವುಗಳಲ್ಲಿ ಬೆಳಗಾಂನ ಕನ್ನಡ ಬರಹಗಾರರ ಬಳಗ ಮತ್ತು ಮೈಸೂರಿನ ವಿಶ್ವವಿದ್ಯಾನಿಲಯ ಗಳನ್ನು ಪ್ರಮುಖವಾಗಿ ಹೆಸರಿಸಬೇಕು.

ಪ್ರತಿಷ್ಠಾನ ಸು. 250 ಜನ ಅತಿಥಿಗಳಿಂದ ಬಿ.ಎಂ.ಶ್ರೀ.ಯವರ ಜೀವನ ಸಾಧನೆಗಳ ಉಪನ್ಯಾಸವನ್ನು ನಡೆಸಿಕೊಟ್ಟಿದೆ. ಇತರ ಸಂಘ ಸಂಸ್ಥೆಗಳೂ ಸು. ಅಷ್ಟೇ ಸಂಖ್ಯೆಯ ಜನರಿಂದ ನಡೆಸಿಕೊಟ್ಟಿವೆ. ಇದರ ಜೊತೆಗೆ ಕಾರ್ಯಕ್ರಮಕ್ಕೆ ಸಹಾಯಕರಾಗಿ ಪ್ರತಿ ಕಾರ್ಯಕ್ರಮಕ್ಕೆ ಸರಾಸರಿ 10 ಜನರನ್ನು ಸಭಿಕರಾಗಿ ಸರಾಸರಿ 50 ಜನರನ್ನು ಲೆಕ್ಕಹಾಕಿದರೆ ಶ್ರೀಯವರ ಶತಮಾನೋತ್ಸವ ಕಾರ್ಯಕ್ರಮ ರಾಜ್ಯಾದ್ಯಂತ ಯಾವ ಮಟ್ಟದಲ್ಲಿ ನಡೆದಿದೆ ಎಂಬುದನ್ನು ಊಹಿಸಿಕೊಳ್ಳಬಹುದು. ಪ್ರಾಯಶಃ ಈ ತರಹದ ಕಾರ್ಯಕ್ರಮ ನಡೆದಿರುವುದು ಇದೇ ಮೊದಲು ಮತ್ತು ಇದು ಮುಂದಿನ ಮಹನೀಯರ ಶತಮಾನೋತ್ಸವಗಳಿಗೆ ನಾಂದಿಯೂ ಆಗಬಲ್ಲದು ಎನ್ನಬಹುದು.

ಈ ಉತ್ಸವ ಕಾರ್ಯಕ್ರಮಗಳಿಗಾಗಿ ಪ್ರತಿಷ್ಠಾನ 45 ಜನ ಪ್ರಾತಿನಿಧಿಕ ಮಹನೀಯರನ್ನೊಳಗೊಂಡ ಒಂದು ಕಾರ್ಯನಿರ್ವಾಹಕ ಸಮಿತಿಯನ್ನು ರಚಿಸಿತ್ತು. ಶ್ರೀ ಜಿ. ನಾರಾಯಣ ಅವರು ಇದರ ಕಾರ್ಯಾಧ್ಯಕ್ಷರಾಗಿದ್ದರು. ಇದರ ಜೊತೆಗೆ ಗ್ರಂಥ ಪ್ರಕಟನ ಸಮಿತಿ. ಶ್ರೀನಿಧಿ ಸಂಪಾದಕ ಮಂಡಲಿ, ಶ್ರೀಗಂಧ ಸಂಪಾದಕ ಮಂಡಲಿ ಮತ್ತು ಸು. 100 ಜನರನ್ನೊಳಗೊಂಡ ಒಂದು ಕೇಂದ್ರಸಮಿತಿಯನ್ನು ರಚಿಸಿತ್ತು. ಬೆಳ್ಳೂರು, ಮಂಗಳೂರು ಮತ್ತು ನಂಜನಗೂಡು ಕಾರ್ಯಕ್ರಮಗಳಲ್ಲಿ ಹಾಗೂ ಇತರ ಸಂಘ ಸಂಸ್ಥೆಗಳಿಂದ ಧಾರವಾಡ, ಪುತ್ತೂರು, ಸಂಪಿಗೆಗಳಲ್ಲಿ ಸ್ವಾಗತ ಸಮಿತಿಗಳು ರಚನೆಯಾಗಿದ್ದವು.

ಸುಮಾರು 350 ಜನ ದಾನಿಗಳು ಪ್ರತಿಷ್ಠಾನಕ್ಕೆ ಉತ್ಸವ-ಕಟ್ಟಡ ನಿಧಿಗಳಿಗಾಗಿ ದಾನ ನೀಡಿದ್ದಾರೆ.

ಪ್ರತಿಷ್ಠಾನದ ಯೋಜನೆಯಂತೆ ಪ್ರತಿ ತಿಂಗಳೂ ನಗರದಲ್ಲಿ ಒಂದು, ನಾಡಿನಲ್ಲಿ ಒಂದರಂತೆ ನಡೆದ ಬಹುಮಟ್ಟಿನ ಎಲ್ಲ ಕಾರ್ಯಕ್ರಮಗಳಲ್ಲೂ ವಿವಿಧ ಕಲಾವಿದರಿಂದ ಬಿ.ಎಂ.ಶ್ರೀ.ಯವರ ಗೀತೆಗಳ ಗಾಯನ, ಅಭಿನಯ ಇತ್ಯಾದಿ ಕಾರ್ಯಕ್ರಮಗಳು ನಡೆದಿವೆ. ಜೊತೆಗೆ ಬಿ.ಇ.ಎಲ್. ಕನ್ನಡ ಸಾಹಿತ್ಯ ಕೂಟ ಗದಾಯುದ್ಧ ನಾಟಕದ ತಂಡವನ್ನೂ, ಮೈಸೂರಿನ ಅಮರಕಲಾ ತಂಡ ಅಶ್ವತ್ಥಾಮನ್ ನಾಟಕ ತಂಡವನ್ನೂ, ಮೈಸೂರಿನ ಶ್ರೀ ಕೆ. ಶಿವರಾಮು ಐತಾಳ ಮತ್ತು ತಂಡದವರು ಅಶ್ವತ್ಥಾಮನ್ ನೃತ್ಯರೂಪಕವನ್ನೂ ಬೆಂಗಳೂರಿನ ವಿದ್ಯಾವರ್ಧಕ ಸಂಘದ ಶ್ರೀ ಕೆ. ಎನ್. ಶ್ರೀಹರಿ ಮತ್ತು ತಂಡದವರು ಅಶ್ವತ್ಥಾಮನ್ ಶ್ರವ್ಯರೂಪಕವನ್ನು, ಬೆಂಗಳೂರಿನ ರಿಸರ್ವ್ ಬ್ಯಾಂಕ್ ಕನ್ನಡ ಸಂಘದ ಕಲಾವಿದರು ಶ್ರೀ ಗೀತೆಗಳ ಗಾಯನ ಸಮೂಹವನ್ನು— ಹೀಗೆ ಇನ್ನೂ ಅನೇಕ ಕಲಾವಿದರು, ಗಾಯಕರು ಶ್ರೀಯವರ ಕೃತಿಗಳನ್ನು, ಗೀತೆಗಳನ್ನು ವಾಚನ ಮಾಡಿ, ಹಾಡಿ, ಅಭಿನಯ ಮಾಡಿ ಪ್ರಾಯೋಗಿಕವಾಗಿ ಶ್ರೀಯವರನ್ನು ಕನ್ನಡಿಗರಿಗೆ ಪರಿಚಯಮಾಡಿಕೊಡುವಲ್ಲಿ ಶ್ರಮಿಸಿದ್ದಾರೆ.

ಪ್ರತಿಷ್ಠಾನದಂತೆಯೇ ಇತರ ಸಂಘ ಸಂಸ್ಥೆಗಳೂ ಪ್ರತಿಷ್ಠಾನದ ಕರೆಗೆ ಓಗೊಟ್ಟು ಉತ್ಸವ ಕಾರ್ಯಕ್ರಮಗಳ ಜೊತೆಗೆ ಇತರ ಸ್ಮಾರಕಗಳನ್ನೂ ನೆನಪಿನ ಕಾರ್ಯಗಳನ್ನೂ ನಡೆಸಿವೆ.

**ಸ್ಮಾರಕಗಳು**

ಕೆ.ಜಿ.ಎಫ್.ನಲ್ಲಿರುವ 'ಕನ್ನಡ ಮಿತ್ರರು' ಬೆಮೆಲ್ ನಗರದಲ್ಲಿ ತಮ್ಮ ಸಂಘದ ಭವನಕ್ಕೆ ಶ್ರೀಯವರ ಹೆಸರಿಟ್ಟು ಪ್ರಪ್ರಥಮ **ಶ್ರೀ ಸ್ಮಾರಕ ಭವನವನ್ನು** ನಿರ್ಮಿಸಿದ್ದಾರೆ.

ದೊಡ್ಡಬಳ್ಳಾಪುರದ ಕನ್ನಡ ಜಾಗೃತಿ ಪರಿಷತ್ತು, ಡಿ ಕ್ರಾಸ್‌ನಿಂದ ನಗರದ ಮೂಲಕ ರೈಲ್ವೆ ನಿಲ್ದಾಣದವರೆಗೆ ಹಾದುಬರುವ ರಸ್ತೆಗೆ **'ಬಿ.ಎಂ.ಶ್ರೀ. ರಸ್ತೆ'** ಎಂಬ ಹೆಸರಿಟ್ಟಿದ್ದಾರೆ. ಆ ಮಾರ್ಗದಲ್ಲಿ ಹಾದುಹೋಗುವ ಪ್ರಯಾಣಿಕರಿಗೆ ಎರಡೂ ಕಡೆ ಕಲ್ಲಿನಲ್ಲಿ ಮುದ್ದಾಗಿ ಕೆತ್ತಿ ಬಣ್ಣ ಹಾಕಿರುವ ಬೋರ್ಡುಗಳು ಆನಂದವನ್ನುಂಟು

ಮಾಡುತ್ತಿದೆ. ಬೆಳಗಾವಿ ಜಿಲ್ಲೆಯ ಕರಡಿಗುದ್ದಿ ಗ್ರಾಮದ ಒಂದು ವಿದ್ಯಾಮಂದಿರ ವಿಶಾಲವಾದ ಶಾಲಾ ಆವರಣಕ್ಕೆ **'ಬಿ.ಎಂ.ಶ್ರೀ. ಕನ್ನಡ ಉದ್ಯಾನ'** ಎಂಬ ಹೆಸರನ್ನಿಟ್ಟು ಒಂದು ಒಳ್ಳೆಯ ಉದ್ಯಾನವನವನ್ನು ಸಿದ್ಧಮಾಡುತ್ತಿದೆ.

ಬೆಂಗಳೂರಿನ ವಿದ್ಯಾವರ್ಧಕ ಸಂಘ ಮೈಸೂರಿನ ಕುವೆಂಪು ನಗರದಲ್ಲಿರುವ ತನ್ನ ವಿದ್ಯಾಸಂಸ್ಥೆಗಳ ಆವರಣಕ್ಕೆ **'ಬಿ.ಎಂ.ಶ್ರೀ. ವಿದ್ಯಾಸಂಸ್ಥೆಗಳು'** ಎಂಬ ಹೆಸರನ್ನಿಟ್ಟು "ಶ್ರೀಧಾಮ" ಎಂದು ಕರೆದಿದೆ.

ಇವೆಲ್ಲಕ್ಕೂ ಮೊದಲೇ ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ಬಿ.ಎಂ.ಶ್ರೀ.ಯವರ ಹೆಸರಿನಲ್ಲಿ ಒಂದು **'ಪ್ರಾಧ್ಯಾಪಕ ಪೀಠ'**ವನ್ನು ಪ್ರಾರಂಭಿಸಿದೆ.

## ನೆನಪಿನ ಕಾರ್ಯಗಳು

ಬೆಂಗಳೂರಿನ 'ಸಾಹಿತ್ಯ ಸಂಗಮ' ವರ್ಷದ ಆರಂಭದಲ್ಲೇ ಶ್ರೀಯವರ ಮುದ್ದಾದ ಬಣ್ಣದ ಚಿತ್ರವಿರುವ **ಶುಭಾಶಯ ಪತ್ರ**ವನ್ನು ಪ್ರಕಟಿಸಿತ್ತು.

ನಗರದ ಇನ್ನೊಂದು ಸಂಸ್ಥೆಯಾದ ಕರ್ನಾಟಕ ಸರ್ವೋದಯದ ಶ್ರೀ ತಿರುಮಲೆ ಶ್ರೀರಂಗಾಚಾರ್ಯ ಅವರು ಅಲ್ಯುಮಿನಿಯಂ ಬಿಲ್ಲೆಯ ಮೇಲೆ ಶ್ರೀಯವರ ಭಾವಚಿತ್ರವನ್ನು ಮುದ್ರಿಸಿ ಬ್ಯಾಡ್ಜ್ ರೀತಿಯಲ್ಲಿ **'ಶ್ರೀ ನೆನಪಿನ ಬಿಲ್ಲೆ'**ಯನ್ನು ತಯಾರಿಸಿದ್ದರು.

ತುಮಕೂರಿನ ಬರಹಗಾರರ ಬಳಗ, ಧಾರವಾಡದ ಜೆ.ಎಸ್.ಎಸ್. ಕಾಲೇಜು ಮತ್ತು ಇನ್ನು ಕೆಲವು ಸಂಸ್ಥೆಗಳು ಆಯಾ ಜಿಲ್ಲಾ ಮಟ್ಟದಲ್ಲಿ ಬಿ.ಎಂ.ಶ್ರೀ. ಪ್ರಬಂಧ ಸ್ಪರ್ಧೆಗಳನ್ನು ನಡೆಸಿವೆ.

ಕೋಲಾರದ ಕೋಲಾರ ಪತ್ರಿಕೆ ಮತ್ತು ಬೆಂಗಳೂರಿನ ಶಕ್ತಿ ಪತ್ರಿಕೆಗಳು ಜನವರಿಯಲ್ಲಿ ಶ್ರೀ ಭಾವಚಿತ್ರವಿರುವ **ಕ್ಯಾಲೆಂಡರ್**ಗಳನ್ನು ಮುದ್ರಿಸಿದ್ದವು.

ತರಂಗ, ಪ್ರಜಾಮತ, ಸಂಯುಕ್ತ ಕರ್ನಾಟಕ, ಉದಯವಾಣಿ ಮುಂತಾದ ಪ್ರಮುಖ ಪತ್ರಿಕೆಗಳು ಹಾಗೂ ಅನೇಕ ಜಿಲ್ಲಾ, ತಾಲ್ಲೂಕು ಮಟ್ಟದ ಪತ್ರಿಕೆಗಳು ಶ್ರೀಯವರ ನೆನಪಿಗಾಗಿ, ಉತ್ಸವಾಚರಣೆಯ ಅವಧಿಯಲ್ಲಿ ವಿಶೇಷ ಸಂಚಿಕೆಗಳನ್ನು ಪ್ರಕಟಿಸಿದವು.

'ತರಂಗ' ಪತ್ರಿಕೆ ಬಿ.ಎಂ.ಶ್ರೀ.ಯವರ **ವರ್ಣಚಿತ್ರ**ವನ್ನು ಕಲಾವಿದ ಶ್ರೀ ಬಿ. ಕಿಶನ್ ಅವರಿಂದ ಬರೆಯಿಸಿದೆ. (ಇದನ್ನು ಪ್ರತಿಷ್ಠಾನಕ್ಕೆ ದಾನಮಾಡಿದೆ)

ಈ ಸಂದರ್ಭದಲ್ಲಿ ಶ್ರೀಯವರ ಜೀವನ, ಸಾಧನೆ, ಸ್ಮೃತಿ ಮತ್ತು ಕೃತಿಗಳನ್ನು ಕುರಿತಂತೆ ನೆನಪಿನ ಹಾಗೂ ವಿಮರ್ಶಾತ್ಮಕವಾದ ಸುಮಾರು ಇನ್ನೂರು ಲೇಖನಗಳು ವಿವಿಧ ಪತ್ರಿಕೆ ಮತ್ತು ಪುಸ್ತಕಗಳಲ್ಲಿ ಪ್ರಕಟವಾಗಿವೆ. (ವಿವರಗಳಿಗೆ 'ಶ್ರೀ ಸಿಧಿ' ಸಂಪುಟ ನೋಡಿ).

ಸುರತ್ಕಲ್ಲಿನ ವಿದ್ವಾನ್ ಶ್ರೀ ಕೆ. ವೆಂಕಟರಾಯಾಚಾರ್ಯ ಅವರು ತಮ್ಮ ಕೃತಿಯಾದ 'ಸಾಹಿತ್ಯ ಪ್ರಭೆ'ಯನ್ನು ಬಿ.ಎಂ.ಶ್ರೀ.ಯವರ ಸವಿನೆನಪಿಗಾಗಿ ಅರ್ಪಿಸಿ

ಪ್ರಕಟಿಸಿದ್ದಾರೆ. ಇದೇ ರೀತಿ ಅನೇಕ ಜನ ಸಾಹಿತಿಗಳು ತಮ್ಮ ಪ್ರಕಟನೆಗಳನ್ನು ಶ್ರೀಯವರ ಸ್ಮರಣೆಗೆ ಅರ್ಪಿಸಿದ್ದಾರೆ. ಕೆಲವು ಮಹನೀಯರು ಮತ್ತು ಸಂಸ್ಥೆಗಳು ಬಿ.ಎಂ.ಶ್ರೀಯವರನ್ನು ಕುರಿತ ಗ್ರಂಥಗಳನ್ನು ಪ್ರಕಟಿಸಿದೆ. (ಪ್ರತ್ಯೇಕ ಪಟ್ಟಿ ಇದೆ)

ಧಾರವಾಡದ ಪ್ರೊ|| ರಾ. ಯ. ಧಾರವಾಡಕರ ಅವರೊಬ್ಬರೇ ಕರ್ನಾಟಕದ ವಿವಿಧ ಕಡೆ ನಡೆದ ಸುಮಾರು ಹತ್ತು-ಹದಿನೈದು ಬಿ.ಎಂ.ಶ್ರೀ. ಕಾರ್ಯಕ್ರಮಗಳಲ್ಲಿ ಅತಿಥಿಗಳಾಗಿ ಭಾಗವಹಿಸಿ ಬಿ.ಎಂ.ಶ್ರೀ.ಯವರ ಜೀವನ, ಸಾಧನೆಗಳನ್ನು ಕುರಿತು ಉಪನ್ಯಾಸಗಳನ್ನು ನೀಡಿದ್ದಾರೆ.

ಪ್ರತಿಷ್ಠಾನವೇ ನೇರವಾಗಿ ದೆಹಲಿಯ ಸಾಹಿತ್ಯ ಅಕಡೆಮಿಯೊಂದಿಗೆ ದೆಹಲಿಯಲ್ಲಿ, ಗುಲಬರ್ಗ ವಿಶ್ವವಿದ್ಯಾನಿಲಯದೊಂದಿಗೆ ಗುಲಬರ್ಗದಲ್ಲಿ ಮತ್ತು ತನ್ನ ಐವನೇ ಹುಟ್ಟುಹಬ್ಬದ ಸಂದರ್ಭದಲ್ಲಿ ಬೆಂಗಳೂರಿನಲ್ಲಿ ಸ್ಮರಣೀಯ ವಿದ್ವತ್ಪೂರ್ಣ ವಿಚಾರಗೋಷ್ಠಿಗಳನ್ನು ನಡೆಸಿದೆ. ರಾಜ್ಯ ಸಾಹಿತ್ಯ ಅಕಡೆಮಿ, ಮೈಸೂರು ವಿಶ್ವವಿದ್ಯಾನಿಲಯ, ಕರ್ನಾಟಕ ವಿಶ್ವವಿದ್ಯಾಲಯ ಹಾಗೂ ಮುಂಬಯಿ ವಿಶ್ವವಿದ್ಯಾನಿಲಯಗಳೂ ಸಹ ಇಂಥ ವಿಚಾರಗೋಷ್ಠಿಗಳನ್ನು ನಡೆಸಿವೆ.

ಬಿ.ಎಂ.ಶ್ರೀ. ಜನ್ಮಶತಮಾನೋತ್ಸವದ ಒಂದು ಪ್ರಮುಖ ವೈಶಿಷ್ಟ್ಯವೆಂದರೆ ಬಿ.ಎಂ.ಶ್ರೀ.ಯವರ ಜೊತೆಗೇ ಅವರ ಸಮಕಾಲೀನರಾದ ಟಿ. ಪಿ. ಕೈಲಾಸಂ, ಮುಳಿಯ ತಿಮ್ಮಪ್ಪಯ್ಯ? ಹುಯಿಲಗೋಳ ನಾರಾಯಣರಾವ್ ಮತ್ತು ಎಂ. ಎನ್. ಕಾಮತ್ ಅವರುಗಳ ಜನ್ಮಶತಮಾನೋತ್ಸವ ಕಾರ್ಯಕ್ರಮಗಳನ್ನು ಸಂಯೋಜಿಸಿದ್ದು. ಪ್ರತಿಷ್ಠಾನ ನಡೆಸಿದ ಮತ್ತು ಇತರ ಸಂಘಸಂಸ್ಥೆಗಳು ನಡೆಸಿದ ಸುಮಾರು ಕಾರ್ಯಕ್ರಮಗಳಲ್ಲಿ ಈ ಎಲ್ಲ ಮಹನೀಯರನ್ನೂ ಒಟ್ಟಿಗೆ ಸ್ಮರಿಸುವ ಕಾರ್ಯ ನಡೆದಿದೆ.

ಒಟ್ಟಾರೆ ಬಿ.ಎಂ.ಶ್ರೀ. ಪ್ರತಿಷ್ಠಾನ ಹಾಕಿಕೊಂಡಿದ್ದ ವ್ಯಾಪಕವಾದ ವೈವಿಧ್ಯಮಯ ಯೋಜನೆಗೆ ನಾಡಿನ ಜನತೆ ಸಂಪೂರ್ಣವಾಗಿ ಸಹಕರಿಸಿ ಅರ್ಥಪೂರ್ಣವಾಗಿ ಆಚರಿಸಲು ನೆರವಾಗಿದ್ದಾರೆ. ಹಿಂದೆ ಎಂದೂ ನಡೆಯದ ರೀತಿಯಲ್ಲಿ ಕನ್ನಡದ ಪ್ರಥಮಾಚಾರ್ಯರನ್ನು ಕನ್ನಡಿಗರು ಮುಂದೆಯೂ ಸ್ಮರಿಸಿಕೊಳ್ಳುವಂಥ ಕಾರ್ಯಕ್ರಮ ಇಂದು ನಡೆದಿದೆ ಎನ್ನಬಹುದು.

—ನಾ. ಗೀತಾಚಾರ್ಯ
ಕಾರ್ಯದರ್ಶಿ
ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಮಿತಿ



# ಬೇರೆ ಬೇರೆ ಸಂಘ ಸಂಸ್ಥೆಗಳು ನಡೆಸಿದ ಬಿ.ಎಂ.ಶ್ರೀ. ಕಾರ್ಯಕ್ರಮಗಳು

(ನಮ್ಮ ಗಮನಕ್ಕೆ ಬಂದಿರುವವುಗಳು ಮಾತ್ರ)

(ಪ್ರತಿಷ್ಠಾನ ನಡೆಸಿದ ಬಿ.ಎಂ.ಶ್ರೀ. ಕಾರ್ಯಕ್ರಮಗಳ ವಿವರವಾದ ವರದಿಗಳನ್ನು ಮತ್ತು ಶತಮಾನೋತ್ಸವ ಕಾರ್ಯಕ್ರಮಗಳಿಗಾಗಿ ದಾನಮಾಡಿದವರ ಪಟ್ಟಿಯನ್ನು ಶೋಧನ 2, 3 ಮತ್ತು 5ನೇ ಸಂಚಿಕೆಗಳಲ್ಲಿ ಪ್ರಕಟಿಸಿದೆ).

## ಬೆಂಗಳೂರಿನಲ್ಲಿ ನಡೆದ ಕಾರ್ಯಕ್ರಮಗಳು

| ಸಂಸ್ಥೆಯ ಹೆಸರು | ದಿನಾಂಕ | ಸ್ಥಳ |
|---|---|---|
| ಸರ್ಕಾರಿ ಕಲಾ ಕಾಲೇಜು | ಡಿಸೆಂಬರ್ 1983 | ಬೆಂಗಳೂರು |
| ಕನ್ನಡ ಸಾಹಿತ್ಯ ಪರಿಷತ್ತು | 3–1–1984 | ಚಾಮರಾಜಪೇಟೆ |
| ಮಹಾರಾಣಿ ಕಲಾ ಕಾಲೇಜು | 13–1–1984 | ಬೆಂಗಳೂರು |
| ಕನ್ನಡ ಸಾಹಿತ್ಯ ಕೂಟ | 20–1–1984 | ಬಿ.ಇ.ಎಲ್. |
| ಬಿ.ಇ.ಎಂ.ಎಲ್. ಕನ್ನಡ ಸಂಘ | 21–1–1984 | ಯಶವಂತಪುರ |
| ಕುವೆಂಪು ಅಧ್ಯಯನ ಕೇಂದ್ರ | 26–1–1984 | ರಾಜಾಜಿನಗರ |
| ಶಶಿಕಲಾವಿದರು | 12–2–1984 | ಚಾಮರಾಜಪೇಟೆ |
| ಯುವ ಬರಹಗಾರರ ಮತ್ತು ಕಲಾವಿದರ ಸಂಘ | 4–3–1984 | ನೃಪತುಂಗ ರಸ್ತೆ |
| ಕರ್ನಾಟಕ ಲೇಖಕಿಯರ ಸಂಘ | 4–3–1984 | ಚಾಮರಾಜಪೇಟೆ |
| ಎಚ್.ಎಂ.ಟಿ. ಕನ್ನಡ ಸಂಘ | 28–6–1984 | ಎಚ್.ಎಂ.ಟಿ. |
| ಮ. ರಾಮಮೂರ್ತಿ ಕನ್ನಡ ಬಳಗ | 15–11–1984 | ಶ್ರೀರಾಮಪುರ |
| 'ಟೆಕ್ಸಾರ್' ಕನ್ನಡ ಬಳಗ | 19–11–1984 | ನೃಪತುಂಗ ರಸ್ತೆ |
| ಕಿಂಕೋ ಕನ್ನಡ ಸಂಘ | 25–11–1984 | ಬ್ಯಾಟರಾಯನಪುರ |
| ಬೆಂಗಳೂರು ತಮಿಳು ಸಂಘ | 27–11–1984 | ಅಲಸೂರು |

## ಜಿಲ್ಲಾ, ತಾಲೂಕುಗಳಲ್ಲಿ ನಡೆದ ಕಾರ್ಯಕ್ರಮಗಳು

| | | |
|---|---|---|
| ಕನ್ನಡ ಅಧ್ಯಯನ ಸಂಸ್ಥೆ | 3–1–1983 | ಮೈಸೂರು |
| ಜೆ.ಎಸ್.ಎಸ್. ಕಾಲೇಜು | 1–1–1984 | ಧಾರವಾಡ |
| ಕರ್ನಾಟಕ ಸಾಹಿತ್ಯ ಅಕಡೆಮಿ | 3–1–1984 | ಧಾರವಾಡ |
| ಕನ್ನಡ ಬರಹಗಾರರ ಬಳಗ | 3–1–1984 | ಬೆಳಗಾವಿ |

(ಇವರು ಜಿಲ್ಲೆಯಾದ್ಯಂತ ಪ್ರತಿ ಭಾನುವಾರ ಒಂದೊಂದು ಕಾರ್ಯಕ್ರಮದಂತೆ ಸುಮಾರು 52 ಕಾರ್ಯಕ್ರಮಗಳನ್ನು ನಡೆಸುವುದಾಗಿ ವರದಿಯಾಗಿದೆ)

| ಸಂಸ್ಥೆಯ ಹೆಸರು | ದಿನಾಂಕ | ಸ್ಥಳ |
|---|---|---|
| ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಮಿತಿ | 3-1-1984 | ಸಂಪಿಗೆ |
| ಕರ್ನಾಟಕ ರಾಜ್ಯ ವಯಸ್ಕರ ಶಿಕ್ಷಣ ಸಮಿತಿ | 3-1-1984 | ಮೈಸೂರು |
| ತರಳ ಬಾಳು ಜಗದ್ಗುರು ಮಹಿಳಾ ಕಿರಿಯ ಕಾಲೇಜು | 5-1-1984 | ಚಿಕ್ಕಮಗಳೂರು |
| ವಿದ್ಯಾರಣ್ಯ ಕನ್ನಡ ಸಂಘ | 8-1-1984 | ಪಿರಿಯಾಪಟ್ಟಣ |
| ತಾಲೂಕು ಅಭಿವೃದ್ಧಿ ಮಂಡಲಿ ಪ್ರೌಢಶಾಲೆ | 14-1-1984 | ದೇವಲಾಪುರ |
| ಶಂಕ್ರಪ್ಪ ಸಕ್ರಿ ಕಿರಿಯ ವಿದ್ಯಾಲಯ | 16-1-1984 | ಬಾಗಲಕೋಟೆ |
| ಅಜಪುರ ಕರ್ನಾಟಕ ಸಂಘ | 19-1-1984 | ಬ್ರಹ್ಮಾವರ |
| ಎಂ.ಜಿ.ಎಂ. ಕಾಲೇಜು | 20-1-1984 | ಉಡುಪಿ |
| ಮಹಾರಾಜ ಕಾಲೇಜು | 21-1-1984 | ಮೈಸೂರು |
| ಡಿ. ವಿ. ಚಿತ್ತಾಲ ಸ್ಮಾರಕ ಉಪನ್ಯಾಸ | 22-1-1984 | ಕಾರವಾರ |
| ಕರ್ನಾಟಕ ಸಂಘ | 24-1-1984 | ಕುಂದಾಪುರ |
| ಭುವನೇಂದ್ರ ಕಾಲೇಜು | 27-1-1984 | ಕಾರ್ಕಳ |
| ಕನ್ನಡ ಗೆಳೆಯರ ಬಳಗ | 27-1-1984 | ನೆಲಮಂಗಲ |
| ಕನ್ನಡ ಬರಹಗಾರರ ಬಳಗ | 3-2-1984 | ಬೆಳಗಾವಿ |
| ಸರ್ಕಾರಿ ಕಲಾ ಮತ್ತು ವಿಜ್ಞಾನ ಕಾಲೇಜು | 6-2-1984 | ಶಿರಸಿ |
| ಕನ್ನಡ ಜಾಗೃತಿ ಪರಿಷತ್ತು | 11-2-1984 | ದೊಡ್ಡಬಳ್ಳಾಪುರ |
| ಕಬ್ಬಿಗರ ಕೂಟ | 11-2-1984 | ಗದಗ |
| ಕನ್ನಡ ಸಂಘ, ಲಿಂಗರಾಜು ಕಾಲೇಜು | 13-2-1984 | ಬೆಳಗಾವಿ |
| ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು | 26-2-1984 | ಮುಂಡಗೋಡು |
| ಕನ್ನಡ ಬರಹಗಾರರ ಬಳಗ | 10-3-1984 | ಬೆಳಗಾವಿ |
| " | 11-3-1984 | " |
| ಕರ್ನಾಟಕ ಸಂಘ | 11-3-1984 | ಪುತ್ತೂರು |
| ಸರ್ಕಾರಿ ಕಿರಿಯ ಕಾಲೇಜು | 25-3-1984 | ಆದಿಚುಂಚನಗಿರಿ |
| ಕನ್ನಡ ಯುವಕರ ಸಂಘ | 2-4-1984 | ಬಿಡದಿ |
| ಕನ್ನಡ ಬರಹಗಾರರ ಬಳಗ | 2-4-1984 | ಬೆಳಗಾವಿ |
| ರಾಜಕುಮಾರ್ ಅಭಿಮಾನಿಗಳ ಸಂಘ (ಪದವೀಧರರ ವಿಭಾಗ) | 11-4-1984 | ಕೆ.ಜಿ.ಎಫ್. |

| ಸಂಸ್ಥೆಯ ಹೆಸರು | ದಿನಾಂಕ | ಸ್ಥಳ |
|---|---|---|
| ಕನ್ನಡ ಮಿತ್ರರು | 9-5-1984 | ಕೆ.ಜಿ.ಎಫ್. |
| ಕನ್ನಡ ಬರಹಗಾರರ ಬಳಗ | 7-8-1984 | ಕರಡಿಗುಪ್ಪೆ ಗ್ರಾಮ |
| ಮೈಸೂರು ವಿಶ್ವವಿದ್ಯಾಲಯ | 1-10-1984 | ಮೈಸೂರು |
| ಕನ್ನಡ ಅಧ್ಯಯನ ಪೀಠ | 21, 22-11-1984 | ಧಾರವಾಡ |
| ಕನ್ನಡ ಅಧ್ಯಯನ ಸಂಸ್ಥೆ | 3-1-1985 | ಮೈಸೂರು |
| ಕನ್ನಡ ಜಾಗೃತಿ ಪರಿಷತ್ತು | 26-1-1985 | ದೊಡ್ಡಬಳ್ಳಾಪುರ |
| ವಿದ್ಯಾವರ್ಧಕ ಸಂಘ | 8-2-1985 | ಮೈಸೂರು |
| ಜಿಲ್ಲಾ ಕನ್ನಡ ಸಾಹಿತ್ಯ ಪರಿಷತ್ತು | 31-3-1985 | ಮೈಸೂರು |
| ತಾಲೂಕು ಕನ್ನಡ ಸಾಹಿತ್ಯ ಪರಿಷತ್ತು | ಏಪ್ರಿಲ್ 1985 | ಮಧುಗಿರಿ |

**ಹೊರನಾಡುಗಳಲ್ಲಿ ನಡೆದ ಕಾರ್ಯಕ್ರಮಗಳು**

| | | |
|---|---|---|
| ಕನ್ನಡ ವಿಭಾಗ, ಮದರಾಸು ವಿಶ್ವವಿದ್ಯಾಲಯ | 23-12-1983 | ಮದರಾಸು |
| ಕರ್ನಾಟಕ ಸಂಘ | 22-9-1984 | ಮಧುರೈ |
| ಕನ್ನಡ ವಿಭಾಗ, ಮುಂಬಯಿ ವಿಶ್ವವಿದ್ಯಾಲಯ | ಫೆಬ್ರವರಿ 1985 | ಮುಂಬಯಿ |

---

# ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ಸಂದರ್ಭದಲ್ಲಿ ಪ್ರತಿಷ್ಠಾನ ಪ್ರಕಟಿಸಿರುವ ಬಿ.ಎಂ.ಶ್ರೀ. ವಿಶೇಷ ಪ್ರಕಟನೆಗಳು

(ರಕ್ಷಾಪುಟ ನೋಡಿ)

---

## ಇತರರು ಪ್ರಕಟಿಸಿದ ಪ್ರಕಟನೆಗಳು

1. ಶ್ರೀ ಸಾಹಿತ್ಯ (ಸಮಗ್ರ ಕೃತಿ ಸಂಪುಟ) : ಮೈಸೂರು ವಿಶ್ವವಿದ್ಯಾಲಯ, ಮೈಸೂರು.
2. ಶ್ರೀಕಂಠಿಕೆ (ಶ್ರೀ ರಜತ ಪದಕ ವಿಜೇತ ಕವನ ಸಂಕಲನ) : ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.
3. ಪ್ರಬುದ್ಧ ಕರ್ನಾಟಕ ಶ್ರೀ ಸಂಚಿಕೆ : ಮೈಸೂರು ವಿ.ವಿ., ಮೈಸೂರು.
4. ಕನ್ನಡ ನುಡಿ : ಶ್ರೀ ನೂರರ ನೆನಪು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.
5. ಶ್ರೀ ಉತ್ಸವ (ಲೇಖನ ಸಂಗ್ರಹ) ಸಂ : ಶ್ರೀಮತಿ ವಿಶಾಲಾಕ್ಷಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು. (ಅಚ್ಚಿನಲ್ಲಿ)
6. ಶ್ರೀ ಸ್ಮರಣೆ : ಜೆ. ಎಸ್. ಎಸ್. ಕಾಲೇಜು, ಧಾರವಾಡ.
7. ಶ್ರೀ ನಮನ : ಡಾ॥ ರಾ. ಯ. ಧಾರವಾಡಕರ, ಧಾರವಾಡ.
8. ಬಿ. ಎಂ. ಶ್ರೀಕಂಠಯ್ಯ : ವಿ. ಎಂ. ಇನಾಂದಾರ್, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು.
9. ನಾಡೋಜ ಬಿ.ಎಂ.ಶ್ರೀ. : ಎಂ. ವಿ. ಸೀತಾರಾಮಯ್ಯ, ರಾಘವ ಪ್ರಕಾಶನ, ಬೆಂಗಳೂರು.
10. ಶ್ರೀ ಪರಿಚಯ : ರಿಸರ್ವ್ ಬ್ಯಾಂಕ್ ಕನ್ನಡ ಸಂಘ, ಬೆಂಗಳೂರು.
11. ಬಿ. ಎಂ. ಶ್ರೀಕಂಠಯ್ಯ : ಡಾ॥ ರಾಮಚಂದ್ರಶರ್ಮ, ಬೆಂಗಳೂರು ವಿಶ್ವವಿದ್ಯಾಲಯ, ಬೆಂಗಳೂರು. (ಅಚ್ಚಿನಲ್ಲಿ)
12. ಪುಸ್ತಕ ಪುರವಣಿ : ಶ್ರೀ ಸಂಚಿಕೆ, ರಾಜ್ಯ ವಯಸ್ಕ ಶಿಕ್ಷಣ ಮಂಡಳಿ, ಮೈಸೂರು.

---

# ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ—ದಾನಿಗಳು

[ಕಳೆದ ಸಂಚಿಕೆಯಿಂದ ಮುಂದುವರಿದುದು. ವಿ.ಸೂ.: ಬೆಂ : ಬೆಂಗಳೂರು. ಕ : ಕಟ್ಟಡ ನಿಧಿ]

ರೂ.ಗಳು **ಸರ್ವಶ್ರೀ :**

1,000 . ನಂಜನಗೂಡು ಕಿರಿಯ ಕಾಲೇಜು ಮತ್ತು ಪೌರರ ಬಿ.ಎಂ.ಶ್ರೀ. ಜನ್ಮ ಶತಾಬ್ದಿ ಉತ್ಸವ ಸಮಿತಿ. ನಂಜನಗೂಡು : (ಕ), ಎಂ. ಎಸ್. ಚಿಂತಾಮಣಿ, ಬೆಂ; (ಕ)

250 : ಹೊ. ರಾ. ಕೃ. ಗೆಳೆಯರು, ಬೆಂ ; (ಕ), ಕರ್ನಾಟಕ ಸಂಘ, ಅಹಮದಾಬಾದ್ ; (ಕ)

200 : ಎಸ್. ಆರ್. ಆರ್. ಕೆ. ಶರ್ಮ, ಬೆಂ ; (ಕ). ಕನ್ನಡ ಬಳಗ, ಟೆಕ್ಸಾಕ್, ಬೆಂ ; (ಕ), ಬಬ್ಬೂರು ಕಮ್ಮೆ ಸೇವಾ ಸಮಿತಿ, ಬೆಂ ; (ಕ)

150 : ಕರ್ನಾಟಕ ಸಂಘ, ಬರೋಡ ; (ಕ)

100 : ಶ್ರೀಮತಿ ಲಲಿತಮ್ಮ ಚಂದ್ರಶೇಖರ. ಹರಿಹರ ; (ಕ). ವಿ. ಮಾರ್ಕಂಡೇಗೌಡ. ಬೆಂ ; (ಕ), ಜಿ. ಟಿ. ಪಾರ್ಥಸಾರಥಿ, ಬೆಂ ; (ಕ), ಕೆ. ರಾಮಸುಬ್ಬಯ್ಯ. ಬೆಂ ; (ಕ), ಕೆ. ಲಕ್ಷ್ಮೀನಾರಾಯಣರಾವ್, ಬೆಂ ; (ಕ), ಕ್ಷೇಮಾಭ್ಯುದಯ ಸಂಘ, ಬೆಂ ; (ಕ), ವೈ. ಎಸ್. ಚಂದ್ರಶೇಖರ್, ನ್ಯೂಯಾರ್ಕ್ ; (ಕ), ಬಿ. ರಾಮಸ್ವಾಮಿ. ಬೆಂ ; (ಕ). ಎಸ್. ಎ. ಸೀತಾರಾಮಯ್ಯ, ಶಿವಮೊಗ್ಗ ; (ಕ), ಎಸ್. ಆರ್. ಸುಬ್ಬರಾವ್, ನಾಗಪುರ ; (ಕ), ಶ್ರೀಮತಿ ಎಸ್. ವಿ. ತುಂಗಮ್ಮ, ಬೆಂ ; (ಕ), ಶ್ರೀಮತಿ ಎ. ಕೆ. ರಮ ; ಬೆಂ ; (ಕ). ಎಚ್. ರಾಮಣ್ಣ, ನವದೆಹಲಿ.

50 : ದೊಡ್ಡಸ್ವಾಮಿ, ಕೋಲಾರ ; (ಕ), ಸಿ. ಆರ್. ರಾಮಸ್ವಾಮಿ, ಬೆಂ ; (ಕ). ಕೆ. ನಂಜುಂಡಯ್ಯ, ಬೆಂ ; (ಕ), ಕ, ನಂ. ನಾಗರಾಜ್, ಬೆಂ.

25 : ಸೂರ್ಯನಾರಾಯಣರಾವ್. ಬೆಂ ; ಸಿ. ಎಸ್. ಸತ್ಯನಾರಾಯಣ. ಬೆಂ ; ಬಿ. ಎಸ್. ಪ್ರಕಾಶ್, ಬೆಂ; ದೊರೆಸ್ವಾಮಿ. ಬೆಂ; ಪಾಪಯ್ಯ, ಬೆಂ; ರಾ. ಸಂ. ಚಂದ್ರಶೇಖರ್. ಬೆಂ.

20 : ಕೆ. ಎನ್. ರಾಮಚಂದ್ರ, ಬೆಂ ; ಎ. ಎಮ್. ಕೃಷ್ಣ, ಬೆಂ.

15 : ಬಿ. ಎನ್. ನಾರಾಯಣ, ಬೆಂ.

10 : ಆರ್. ಎನ್. ಪ್ರಾಣೇಶರಾವ್. ಬೆಂ; ಎಚ್. ವಿ. ನಾರಾಯಣಮೂರ್ತಿ, ಬೆಂ: ಎಂ. ಎಸ್. ನಾಗರಾಜ್, ಬೆಂ ; ರಾ. ಸುಬ್ಬರಾವ್. ಬೆಂ ; ಕೆ. ವಿ. ಶ್ರೀರಾಮಸ್ವಾಮಿ, ಬೆಂ ; ಕೃಷ್ಣ ಕಿನ್‌ಹಾಳ್. ಬೆಂ ; ಕೃಷ್ಣಚಂದ್ರ. ಬೆಂ ; ಪ್ರಕಾಶ್, ಬೆಂ ; ಗಣೇಶ ಜೋಯಿಸ್. ಬೆಂ. ನರಸಿಂಹನ್, ಬೆಂ ; ವಿಜಯವಿಠ್ಠಲ. ಬೆಂ.

8 : ಎಸ್. ಟಿ. ರಾಧಾಕೃಷ್ಣ. ಬೆಂ.

5 : ಸುಬ್ಬಣ್ಣ–ಬೆಂ. ಪಿ. ಆರ್. ನಾಯಕ್–ಬೆಂ. ಭಾಸ್ಕರರಾವ್–ಬೆಂ. ಬಸವಣ್ಣ–ಬೆಂ. ಬಿ. ಎಂ. ಶ್ರೀಧರ್–ಬೆಂ, ಲೋಕೇಶ್–ಬೆಂ, ರಾಘವೇಂದ್ರರಾವ್–ಬೆಂ. ಬಿ. ಎನ್. ಸುಬ್ಬರಾಯ–ಬೆಂ. ಕೆ. ಪಿ. ವಸಂತ ಮಾಧವ–ಬೆಂ. ಬಿ. ಎನ್. ಕೇಶವ–ಬೆಂ. ಹೆಚ್. ಎಂ. ಕೇಶವಮೂರ್ತಿ–ಬೆಂ, ಜಿ. ಎನ್. ಮಾಧವ–ಬೆಂ, ಎಂ. ಡಿ. ಶಿವಶಂಕರ–ಬೆಂ. ಸಿ. ಎಸ್. ಆನಂದರಾವ್–ಬೆಂ. ಎನ್. ರಾಮಸ್ವಾಮಿ-ಬೆಂ. ಬಿ. ಎಂ. ಗೋ. ಕೃಷ್ಣ–ಬೆಂ, ಎನ್. ಆರ್. ಶೆಟ್ಟಿ–ಬೆಂ, ಸುಭಾಷ್ ಸಂಕ–ಬೆಂ, ಎಸ್. ಜಿ. ಕುಲಕರ್ಣಿ–ಬೆಂ, ಕೆ. ಎನ್. ಮಂಜುನಾಥ್–ಬೆಂ. ಬಿ. ಎಲ್. ರಂಗಪ್ಪ–ಬೆಂ. ಜಿ. ಪ್ರಕಾಶರಾವ್–ಬೆಂ. ಎ. ಸಿ. ಸೇತೂರಾಂ–ಬೆಂ.

3 : ಎಸ್. ಸಿ. ರಮೇಶ್, ಬೆಂ.

2 : ಹೆಚ್. ಎಸ್. ಬಾಲಸುಬ್ರಹ್ಮಣ್ಯಂ–ಬೆಂ. ಯಂ. ಸಂ. ಶಾಮಸುಂದರ–ಬೆಂ. ಹೆಚ್. ಕೆ. ದೇವರಾಜ್–ಬೆಂ.

---




# ವಸ್ತುಸಂಗ್ರಹ

## ಟಿ. ಎಸ್. ವೆಂಕಣ್ಣಯ್ಯನವರ ಜನ್ಮಶತಮಾನೋತ್ಸವ

ಬಿ. ಎಂ. ಶ್ರೀ. ಜನ್ಮಶತಮಾನೋತ್ಸವ ಮುಕ್ತಾಯಗೊಂಡ ಪ್ರಸಕ್ತ ವರ್ಷದಲ್ಲಿಯೇ ಎಂದರೆ ಈ ವರ್ಷ (1985ರ) ಅಕ್ಟೋಬರ್‌ನಲ್ಲಿ ಪ್ರಾರಂಭವಾಗಿ 1986 ಅಕ್ಟೋಬರ್ ಪೂರ್ತಿ ಒಂದು ವರ್ಷ ದಿವಂಗತ ಟಿ. ಎಸ್. ವೆಂಕಣ್ಣಯ್ಯನವರ ಜನ್ಮಶತಮಾನೋತ್ಸವ ವರ್ಷ ಆಗಿಬಂದಿರುವುದು ಔಚಿತ್ಯಪೂರ್ಣವಾಗಿದೆ. ವೆಂಕಣ್ಣಯ್ಯನವರೂ, ಕೃಷ್ಣಶಾಸ್ತ್ರಿಗಳೂ ನನ್ನ ಎರಡು ಭುಜಗಳು ಎಂದು ಬಿ.ಎಂ.ಶ್ರೀ.ಯವರು ಹೇಳುತ್ತಿದ್ದರು. ಕನ್ನಡದ ಕೆಲಸದಲ್ಲಿ ಇಬ್ಬರೂ ಅವರಿಗೆ ಸದಾ ಬೆಂಬಲವಾಗಿದ್ದರು. ಮಾಸ್ತಿಯವರು ಈ ಇಬ್ಬರ ಕನ್ನಡ ಸೇವೆಯನ್ನು ಗಮನದಲ್ಲಿಟ್ಟುಕೊಂಡು, "ಇವರು ಕನ್ನಡದ ಅಶ್ವಿನೀ ದೇವತೆಗಳು" ಎಂದು ಅನ್ವರ್ಥಕವಾಗಿ ಪ್ರಶಂಸಿಸಿದರು. ಎ.ಆರ್.ಕೃ. ಬಹುತೇಕ ಸೆಂಟ್ರಲ್ ಕಾಲೇಜಿನ ಕನ್ನಡ ವಿಭಾಗದ ಮುಖ್ಯರಾಗಿದ್ದುದರಿಂದ, ಕನ್ನಡದ ಮೊತ್ತಮೊದಲ ಪ್ರಾಧ್ಯಾಪಕರಾಗಿ ನೇಮಕಗೊಂಡ ಟಿ.ಎಸ್. ವೆಂಕಣ್ಣಯ್ಯನವರು ವಿಶ್ವವಿದ್ಯಾನಿಲಯದ ಕನ್ನಡದ ಕೆಲಸದಲ್ಲಿ ಬಿ.ಎಂ.ಶ್ರೀ. ಅವರಿಗೆ ಬಲಭುಜವೇ ಆಗಿದ್ದರು. ವೆಂಕಣ್ಣಯ್ಯನವರು ಸೃಜನಶೀಲ ಸಾಹಿತಿಯಾಗಿರದಿದ್ದರೂ ಸೃಜನಶೀಲ ಸಾಹಿತ್ಯ ರಚನೆಯಲ್ಲಿ ಒಲವು ತೋರಿದ ಕೆ. ವಿ. ಪುಟ್ಟಪ್ಪ (ಡಾ॥ ಕುವೆಂಪು), ತೀ.ನಂ.ಶ್ರೀ., ರಾಜರತ್ನಂ, ಎಲ್. ಗುಂಡಪ್ಪ, ಎಂ.ವಿ.ಸೀ., ದಿನಕರ ದೇಸಾಯಿ ಮೊದಲಾದ ವಿದ್ಯಾರ್ಥಿಗಳನ್ನು ಪ್ರೋತ್ಸಾಹಿಸಿದರು. ಸಾಹಿತಿಯಾಗಿರದಿದ್ದರೂ ಸಾಹಿತಿಗಳನ್ನು ಸೃಷ್ಟಿಸಿದ ಕೀರ್ತಿ, ಶ್ರೇಯಸ್ಸು, ಈ ಮಹನೀಯರ ಪಾಲಿಗೆ ಇವೆ. ವೆಂಕಣ್ಣಯ್ಯನವರು ಬರೆದದ್ದು ಸ್ವಲ್ಪವಾದರೂ ಬರೆದ ಬರಹಗಳಲ್ಲಿ ಅವರ ಸಮತೋಲನ ದೃಷ್ಟಿಯ ವಿಮರ್ಶನ ಪ್ರಜ್ಞೆ, ಖಚಿತವಾದ ನಿಲುವು ಎದ್ದುಕಾಣುತ್ತವೆ. ಪಂಪಭಾರತದ ಸಂಪಾದನೆಯಲ್ಲಿ ಅವರ ಪಾತ್ರ ಪ್ರಮುಖವಾಗಿತ್ತು. ಪಂಪಭಾರತ, ಶಬ್ದಮಣಿದರ್ಪಣ ಮುಂತಾದ ಹಳಗನ್ನಡ ಕೃತಿಗಳನ್ನು ಅವರು ಪಾಠ ಹೇಳುತ್ತಿದ್ದ ರೀತಿ ಅನ್ಯಾದೃಶ. ಮಾತು. ಬರಹ. ಎಲ್ಲ ಹಿತಮಿತ. ಮೈಸೂರು ಸಾಹಿತ್ಯ ಸಮ್ಮೇಳನವಾಗಲಿ. ಕುಮಾರವ್ಯಾಸ ಜಯಂತಿಯಾಗಲಿ, ಮಹಾರಾಜರವರ ಕಾಲೇಜು ಕರ್ನಾಟಕ ಸಂಘವೇ ಆಗಲಿ, ಕಿರಿಯರನ್ನು ಮುಂದೆ ಬಿಟ್ಟು ತೆರೆಮರೆಯಲ್ಲಿ ಸ್ಫೂರ್ತಿಯ ಸೆಲೆಯಾಗಿ ದುಡಿಯುತ್ತಿದ್ದರು. ಕನ್ನಡ ಸಾಹಿತ್ಯ ಪರಿಷತ್ತಿನ ಕಾರ್ಯಸಮಿತಿಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದಾರೆ. ಸಾಹಿತ್ಯ ಸಮ್ಮೇಳನಾಧ್ಯಕ್ಷ ಪದವಿ ಅವರನ್ನು ಅರಸಿಕೊಂಡು ಹೋದರೂ ಅದನ್ನು ಒಪ್ಪದೆ ಹೋದ ವಿನಯಶೀಲರು. ಪ್ರಚಾರಪ್ರಸಿದ್ಧಿ ವಿಮುಖರು. ಗೃಹಸ್ಥಾಶ್ರಮದಲ್ಲಿದ್ದುಕೊಂಡೇ ಸಂನ್ಯಾಸಾಶ್ರಮದ ಸಾಧನೆಯಲ್ಲಿ ನಿರತರಾಗಿದ್ದ

ಸಾಧಕ. ಇಂಥ ಮಹನೀಯರ ಜನ್ಮಶತಮಾನೋತ್ಸವವನ್ನು ವೈವಿಧ್ಯಪೂರ್ಣವಾಗಿ ಆಚರಿಸಬೇಕೆಂದು ಮೈಸೂರು ವಿಶ್ವವಿದ್ಯಾನಿಲಯದ ಕನ್ನಡ ಅಧ್ಯಯನ ಸಂಸ್ಥೆ ತೀರ್ಮಾನಮಾಡಿರುವುದು ಅತ್ಯಂತ ಸ್ವಾಗತಾರ್ಹ ; ಅಭಿನಂದನಾರ್ಹ.

ಈಗ ಪ್ರತಿಷ್ಠಾನದ ವಶಕ್ಕೆ ಬಂದಿರುವ ಗದುಗಿನ ಭಾರತ ಸಂಗ್ರಹದ ಸಂಪಾದನೆಯಲ್ಲೂ ಅವರ ಕೈವಾಡವಿತ್ತು ಎಂದು ಊಹಿಸಲು ಅವಕಾಶವಿದೆ. ಅಲ್ಲದೆ, ಮೈಸೂರು ಓರಿಯಂಟಲ್ ಲೈಬ್ರರಿಯ ಗದುಗಿನ ಭಾರತ ಸಂಪಾದನೆಯಲ್ಲೂ ಅವರ ಪಾತ್ರ ಪ್ರಮುಖವಾಗಿತ್ತು.

ಬಿ.ಎಂ.ಶ್ರೀ. ಪ್ರತಿಷ್ಠಾನ ತನ್ನ ಕೈಲಾದ ಮಟ್ಟಿಗೆ ವೆಂಕಣ್ಣಯ್ಯನವರ ಜನ್ಮಶತಮಾನೋತ್ಸವವನ್ನು ಆಚರಿಸುವ ಆಲೋಚನೆ ಮಾಡಿದೆ. ಈ ಉತ್ಸವಾಚರಣೆಯ ನೆನಪಾಗಿ ಪ್ರತಿಷ್ಠಾನದ ದತ್ತಿ ಉಪನ್ಯಾಸಮಾಲಿಕೆಯಲ್ಲಿ (ರೂ. 10.000 ಮೊತ್ತದ) **"ವೆಂಕಣ್ಣಯ್ಯ ಸ್ಮಾರಕ ದತ್ತಿನಿಧಿಯನ್ನು"** ಏರ್ಪಡಿಸುವ ಸಂಕಲ್ಪವೂ ಇದೆ. ಅವರ ಅಭಿಮಾನಿಗಳೂ, ಶಿಷ್ಯಪ್ರಶಿಷ್ಯರೂ ಈ ನಿಧಿಗೆ ಉದಾರರಾಗಿ ಧನಸಹಾಯ ನೀಡಬೇಕೆಂದು ಪ್ರತಿಷ್ಠಾನ ಪ್ರಾರ್ಥಿಸುತ್ತದೆ.

## ಬೀದರ್ ಸಾಹಿತ್ಯ ಸಮ್ಮೇಳನದ ಅಧ್ಯಕ್ಷ ಭಾಷಣ

1985ರ ಏಪ್ರಿಲ್ 5, 6 ಮತ್ತು 7ರಂದು ಬೀದರ್‌ನಲ್ಲಿ ನಡೆದ 57ನೆಯ ಅಖಿಲ ಭಾರತ ಕನ್ನಡ ಸಾಹಿತ್ಯ ಸಮ್ಮೇಳನದಲ್ಲಿ ಮಾಡಿದ ಅಧ್ಯಕ್ಷಭಾಷಣ ಪ್ರಚಲಿತ ಕನ್ನಡ ಸಮಸ್ಯೆಗಳನ್ನು ಕುರಿತು ವಸ್ತುನಿಷ್ಠವೂ ಸತ್ಯನಿಷ್ಠುರವೂ ಆದ ರೀತಿಯಲ್ಲಿ ವ್ಯಾಪಕವಾಗಿ ವಿವೇಚನೆ ನಡೆಸಿರುವ, ಗಮನಾರ್ಹವಾದ ಭಾಷಣ. ಈ ಭಾಷಣ ಕ್ರೌನ್ ಅಷ್ಟಪತ್ರಾಕಾರದ 47 ಪುಟಗಳ ಒಂದು ಪುಸ್ತಿಕೆಯೇ ಆಗಿ ಪರಿಣಮಿಸಿದೆ ಎಂದಮೇಲೆ ಇಲ್ಲಿಯ ಸಣ್ಣ ಟಿಪ್ಪಣಿಯಲ್ಲಿ ಅವರ ಕೆಲವು ಮುಖ್ಯಾಂಶಗಳನ್ನು ಉಲ್ಲೇಖಿಸುವುದು ಮಾತ್ರ ಸಾಧ್ಯ. ಅಧ್ಯಕ್ಷ ಡಾ॥ ಹಾ. ಮಾ. ನಾಯಕರು ಅತ್ಯಂತ ಹೊಣೆಗಾರಿಕೆಯಿಂದ, ಉತ್ಕಟ ಭಾಷಾಭಿಮಾನದಿಂದ ಉತ್ಕಂಠಿತರಾಗಿದ್ದರೂ ಆವೇಶಕ್ಕೆ ಒಳಗಾಗದೆ, ಸಭಾರಂಜನೆಯ ಚಪಲಕ್ಕೆ ಪಕ್ಕಾಗದೆ, ಹೀಗಿದ್ದೂ ಕೇಳುಗರ ಓದುಗರ ಮನಮುಟ್ಟುವಂತಹ ಸಮುಚಿತ ಶೈಲಿಯಲ್ಲಿ ಭಾಷಣವನ್ನು ಸಿದ್ಧಪಡಿಸಿರುವುದು ಅಭಿನಂದನಾರ್ಹ. 'ಸಾಹಿತ್ಯವನ್ನು ಕುರಿತು ಈ ಭಾಷಣದಲ್ಲಿ ವಿವೇಚನೆಯೇ ಇಲ್ಲವಲ್ಲಾ' ಎಂಬ ಆಕ್ಷೇಪ ಏಳಬಹುದು ಎಂಬುದನ್ನು ನಾಯಕರು ಅರಿಯದವರಲ್ಲ. "ಸಾಹಿತ್ಯವನ್ನು ಚರ್ಚಿಸದೆ, ಕನ್ನಡದ ಸಮಸ್ಯೆಗಳಲ್ಲಿ ಕೆಲವನ್ನು ಕುರಿತು ನಾನು ಈ ಸಂದರ್ಭದಲ್ಲಿ ವಿವೇಚಿಸಿರುವುದಕ್ಕೆ ಕಾರಣ, ಕನ್ನಡವನ್ನು ಕರ್ನಾಟಕದಲ್ಲಿ ಭದ್ರಪಡಿಸುವುದೇ ಆಗಿದೆ" ಎಂಬ ಅವರ ಸಮಯ-ಸಂದರ್ಭೋಚಿತ ನಿಲುವೇ ಸಾಹಿತ್ಯಕ್ಕೆ, ಸಂಶೋಧನೆ ಪಾಂಡಿತ್ಯಗಳ ವಿಚಾರಕ್ಕೆ ಅವರು ತಮ್ಮ ಭಾಷಣದಲ್ಲಿ ಪ್ರಾಧಾನ್ಯ ಕೊಡದಿರಲು ಮುಖ್ಯ ಕಾರಣ. ಹಾಗೆಂದು ಆ ವಿಚಾರಗಳನ್ನು ಅವರು ಗಮನಿಸ

ದೆಯೂ ಇಲ್ಲ. ಕನ್ನಡ ಪಂಡಿತ ಪರೀಕ್ಷೆಗಳ ಬಗ್ಗೆ, ಆ ಸಂಬಂಧದ ಸಾಂಪ್ರದಾಯಿಕ ಶಿಕ್ಷಣದ ಬಗ್ಗೆ, ಸಂಸ್ಕೃತ ಶಿಕ್ಷಣ ಮೌಲ್ಯ ಕುಂದಬಾರದು ಎಂಬ ಬಗ್ಗೆ, ಅವರು ವ್ಯಕ್ತಪಡಿಸಿರುವ ಅಭಿಪ್ರಾಯಗಳು ಈ ವಿಚಾರಗಳಲ್ಲಿ ಅವರಿಗಿರುವ ಪ್ರಾಮಾಣಿಕ ಕಳಕಳಿಯನ್ನು ವ್ಯಕ್ತಪಡಿಸುತ್ತವೆ. ಸಾಹಿತ್ಯದ ವಿಷಯವಾಗಿ ಪ್ರಸ್ತಾವಿಸುತ್ತ, ಡಾ॥ ಹಾ. ಮಾ. ನಾಯಕರು ಇಂದಿನ ಸಾಹಿತ್ಯದ ಒಲವು–ನಿಲವುಗಳ ಬಗೆಗೆ ಸೂಚ್ಯವಾಗಿ ನಾಲ್ಕು ಮಾತು ಹೇಳಿದ್ದಾರೆ. ಜ್ಞಾನಪೀಠ ಪ್ರಶಸ್ತಿ ಪಡೆದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರ 'ಚಿಕವೀರ ರಾಜೇಂದ್ರ' ಕಾದಂಬರಿಯ ಬಗೆಗೆ ನಡೆದ ಅಹಿತಕರ ಚರ್ಚೆಯ ವಿಚಾರವನ್ನು ಪ್ರಸ್ತಾವಿಸುತ್ತ, "ಈ ಚರ್ಚೆ ಸಂಪೂರ್ಣವಾಗಿ ಸಾಹಿತ್ಯ ವಿಮರ್ಶೆಯಾಗದಿರುವುದು ವ್ಯಸನದ ಸಂಗತಿ...ಸಾಹಿತ್ಯವನ್ನು ಕುರಿತ ಚರ್ಚೆಯಲ್ಲಿ ಸಾಹಿತ್ಯೇತರ ವಿಚಾರಗಳನ್ನು ತರುವ ಪ್ರವೃತ್ತಿಯನ್ನು ನಾವು ಸಂಪೂರ್ಣವಾಗಿ ತೊಡೆದುಹಾಕಬೇಕು" ಎಂದಿರುವ ನಾಯಕರ ಮಾತನ್ನು ಸಾಹಿತ್ಯಪ್ರೇಮಿಗಳೆಲ್ಲ ಸ್ವಾಗತಿಸಬೇಕು. ಅಂತೆಯೇ ಪೋಲಂಕಿ ರಾಮಮೂರ್ತಿ, ಸಾರಾ ಅಬೂಬಕರ್ ಅವರು ತಮ್ಮ ವಿಚಾರಮಂಡನೆಗಾಗಿ ಹಲ್ಲೆಗೊಳಗಾಗಿರುವುದು ನಾವೆಲ್ಲ ತಲೆತಗ್ಗಿಸುವಂತಾಗಿದೆ ಎನ್ನುವ ನಾಯಕರ ಮಾತನ್ನು ಕುರಿತು ನಾವು ಚಿಂತಿಸಬೇಕು, ಸಾಹಿತ್ಯ ಪ್ರಜಾಸತ್ತೆಯಲ್ಲಿ (Republic of Letters) ವಿಚಾರಸ್ವಾತಂತ್ರ್ಯಕ್ಕೆ ಎಡೆಯಿಲ್ಲದೆ ಹೋದರೆ, ಇನ್ನೆಲ್ಲಿ ಎಡೆ ಅದಕ್ಕೆ? "ಕಸವರಮೆಂಬುದು ನೆರೆ ಸೈರಿಸಲಾರ್ಪೊಡೆ ಪರವಿಚಾರಮಂ ಧರ್ಮಮುಮಂ" ಎಂಬ ಕವಿರಾಜಮಾರ್ಗಕಾರನ ಚಿನ್ನದಂಥ ಮಾತನ್ನು ಈ ಸಂದರ್ಭದಲ್ಲಿ ನೆನೆಯಬೇಕು.

ಡಾ॥ ನಾಯಕರು ತಮ್ಮ ಭಾಷಣದಲ್ಲಿ ವಿವೇಚಿಸಿರುವ ಸಮಸ್ಯೆಗಳು ಹೊಚ್ಚ ಹೊಸವು ಎಂಬ ಭ್ರಮೆಯೇನೂ ಇಲ್ಲ ಅವರಿಗೆ : ಅವರೇ ಹೀಗೆ ಒಪ್ಪಿಕೊಂಡಿದ್ದಾರೆ : "ವಾಸ್ತವವಾಗಿ ಇಲ್ಲಿ ನಾನು ಹೊಸತಾದುದೇನನ್ನೂ ಹೇಳುತ್ತಿಲ್ಲ. ಹಿಂದಿನ ಐವತ್ತಾರು ಸಮ್ಮೇಳನಗಳ ಅಧ್ಯಕ್ಷರು ಆಡಿದ ಮಾತುಗಳಿಗಿಂತ ಹೊಸತಾದುದೇನನ್ನೂ ಹೇಳುವುದು ಸಾಧ್ಯವಲ್ಲ. ಆದರೆ ಕನ್ನಡದ ಹಿತಚಿಂತನೆಯ ದೃಷ್ಟಿಯಿಂದ ಆ ಮಾತುಗಳನ್ನು ಮತ್ತೆ ಮತ್ತೆ ಹೇಳುತ್ತಲೇ ಇರಬೇಕಾಗುತ್ತದೆ. ನಮ್ಮ ಬಯಕೆಗಳು ಎಲ್ಲಿಯವರೆಗೆ ಈಡೇರುವುದಿಲ್ಲವೋ ಅಲ್ಲಿಯವರೆಗೆ ಬಯಕೆಗಳನ್ನು ಹೇಳುತ್ತ ಒತ್ತಾಯಿಸುತ್ತ ಇರುವುದರಲ್ಲಿ ತಪ್ಪೇನಿದೆ?" ಖಂಡಿತ ತಪ್ಪಿಲ್ಲ. ಡಿ.ವಿ.ಜಿ. ಪರಿಷತ್ತಿನ ಉಪಾಧ್ಯಕ್ಷರಾಗಿದ್ದ ಕಾಲದಲ್ಲೆ ಎ.ಆರ್.ಕೃ. ಅವರು ಹಿಂದಿ ಸಮಸ್ಯೆಯ ಬಗ್ಗೆ ಪರಿಷತ್ ಪತ್ರಿಕೆಯಲ್ಲಿ ಕನ್ನಡಿಗರಿಗೆ ಎಚ್ಚರಿಕೆ ನೀಡಿದ್ದರು. ಅವರು ಹೈದರಾಬಾದು ಸಾಹಿತ್ಯ ಸಮ್ಮೇಳನದಲ್ಲಿ ಹಿಂದಿಯನ್ನು ಪ್ರಮುಖ ಮಾಡಿಕೊಂಡು ಪರಭಾಷೆಗಳ ಆಕ್ರಮಣದಿಂದ ಕನ್ನಡ ತಬ್ಬಲಿಯಾಗುತ್ತಿರುವ ಬಗ್ಗೆ ಸ್ವಲ್ಪ ಆವೇಶದಿಂದಲೇ ಕನ್ನಡಿಗರನ್ನು ಎಚ್ಚರಿಸಿದ್ದರು. ಮರೆಯಲಾಗದ. ಮರೆಯಬಾರದ. ಅವರ ಮಾತುಗಳನ್ನು ಮತ್ತೆ ನಮ್ಮ ಗಮನಕ್ಕೆ ತಂದು, ಆ ಮಾತುಗಳ ಹಿನ್ನೆಲೆ

ಯಲ್ಲಿ ಅದೇ ಭಾಷಾ ಸಮಸ್ಯೆ ಹೇಗೆ ಇಂದಿಗೂ ಕನ್ನಡದ ಹಿತಕ್ಕೆ ಆತಂಕಕಾರಿಯಾಗಿದೆ ಎನ್ನುವುದನ್ನು ವಿಶ್ಲೇಷಿಸಿದ್ದಾರೆ ನಾಯಕರು. ಎ.ಆರ್.ಕೃ. ಅವರ ಕಾಲದಲ್ಲಿ ತಲೆಹಾಕಿ ಇಂದು ಆಕ್ಟೋಪಸ್‌ನಂತೆ ವ್ಯಾಪಿಸಿಕೊಳ್ಳುತ್ತಿರುವ ಹಿಂದಿ ಭಾಷೆಯ ಆಕ್ರಮಣಶೀಲಕ್ಕೆ ಕುಮ್ಮಕ್ಕು ಕೊಡುತ್ತಿರುವ ಕೇಂದ್ರಸರ್ಕಾರದ ಪ್ರಚ್ಛನ್ನ ರಾಜಕೀಯ ಧೋರಣೆಯನ್ನು ಸವಿವರವಾಗಿ ಬಯಲುಮಾಡಿದ್ದಾರೆ. ಕೇಂದ್ರದ ಉದ್ದಿಮೆಗಳಲ್ಲಿ ಕನ್ನಡಿಗರಿಗೆ ಯೋಗ್ಯಪ್ರಮಾಣದಲ್ಲಿ ಉದ್ಯೋಗ ಇಲ್ಲದಿರುವುದು. ಕರ್ನಾಟಕದ ಗಡಿಸಮಸ್ಯೆ. ಹೊರನಾಡ ಕನ್ನಡಿಗರು ತಮ್ಮ ಕನ್ನಡತನವನ್ನು ಉಳಿಸಿಕೊಳ್ಳಲು ಕರ್ನಾಟಕ ಸರ್ಕಾರ ಅವರಿಗೆ ನೆರವು ನೀಡಬೇಕಾದ ಅಗತ್ಯ. ವಿಶ್ವವಿದ್ಯಾನಿಲಯಗಳಲ್ಲಿ ಒಂದೋ ಎರಡೋ ಭಾರತೀಯ ಭಾಷೆಗಳನ್ನು ಸಾಹಿತ್ಯದ ಆದಾನ ಪ್ರದಾನಕ್ಕೆ ಸಹಾಯವಾಗುವಂತೆ ಭಾಷಾ ಇಲಾಖೆಗಳನ್ನು ತೆರೆದು ನಡೆಸಬೇಕಾದ ಅಗತ್ಯ. ತ್ರಿಭಾಷಾಸೂತ್ರದ ಅಸಮರ್ಪಕತೆ. ಕನ್ನಡ ಶಾಲೆಗಳ ದುಸ್ಥಿತಿಯಿಂದಾಗಿ ಇಂಗ್ಲಿಷ್ ಮಾಧ್ಯಮ ಶಾಲೆಗಳು ಲಾಭದಾಯಕ ಉದ್ಯಮವಾಗಿ ಬೆಳೆಯುತ್ತಿರುವ ವಿಪರ್ಯಾಸ. ಕನ್ನಡ ಪತ್ರಿಕೆಗಳಲ್ಲಿ ಕನ್ನಡ ಸಾಹಿತ್ಯ-ಸಂಸ್ಕೃತಿ ವಿಚಾರಗಳಿಗೆ ಯೋಗ್ಯ ಪ್ರಾಧಾನ್ಯ ಇಲ್ಲದಿರುವುದು. ಬೆಂಗಳೂರಿನ ಇಂಗ್ಲಿಷ್ ಪತ್ರಿಕೆಗಳಲ್ಲಿ ಕನ್ನಡ ಭಾಷೆ ಸಾಹಿತ್ಯಗಳ ವಿಚಾರಕ್ಕೆ ಸಾಕಷ್ಟು ಸ್ಥಳಾವಕಾಶ ಇಲ್ಲದಿರುವುದು. ಪುಸ್ತಕ ಪ್ರಕಾಶಕರಿಗೆ ಉತ್ತೇಜನದ ಅಭಾವ—ಹೀಗೆ. ಇಂದು ಕರ್ನಾಟಕದಲ್ಲಿ ಕನ್ನಡ ಎದುರಿಸುತ್ತಿರುವ ಸಮಸ್ಯೆಗಳ ಯಥಾರ್ಥ ಚಿತ್ರಣ ನಮ್ಮ ಮುಂದಿದೆ–ಅಧ್ಯಕ್ಷ ಭಾಷಣದಲ್ಲಿ, ಕನ್ನಡಿಗರ ಸ್ವಾಭಿಮಾನವನ್ನು ಪ್ರಶ್ನಿಸುತ್ತ. ಅರ್ಧ ಶತಮಾನಕ್ಕೂ ಹಿಂದೆಯೇ ಕನ್ನಡದ, ಕರ್ನಾಟಕದ, ತಲೆಯಾಳುಗಳು ಪ್ರಾರಂಭಿಸಿದ **ಕನ್ನಡವನ್ನು ಕಟ್ಟುವ ಕೆಲಸ** ಇನ್ನೂ ಬೇಕಾದಷ್ಟು ಇದ್ದೇ ಇದೆ ಎನ್ನುವುದು ಈ ಸಲದ ಅಧ್ಯಕ್ಷ ಭಾಷಣದ ಪಲ್ಲವಿ.

---

## ಅಭಿನಂದನೆ

### ಡಾ॥ ಮಾಸ್ತಿಯವರಿಗೆ ಜ್ಞಾನಪೀಠ ಪ್ರಶಸ್ತಿ ಪ್ರದಾನ

ಬಿ.ಎಂ.ಶ್ರೀ. ಸ್ಮಾರಕ ಪ್ರತಿಷ್ಠಾನದ ಆಜೀವ ಪೋಷಕರಾದ ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರ್ ಅವರಿಗೆ 1984ನೆಯ ಸಾಲಿನ ಜ್ಞಾನಪೀಠ ಪ್ರಶಸ್ತಿ ದೊರೆತ ಬಗೆಗೆ ಪ್ರತಿಷ್ಠಾನದ ಪರವಾಗಿ ನಮ್ಮ ಸಂತೋಷವನ್ನೂ ಗೌರವಪೂರ್ವಕ ಅಭಿನಂದನೆಗಳನ್ನೂ ಹಿಂದಿನ ಸಂಚಿಕೆಯಲ್ಲಿ ವ್ಯಕ್ತಪಡಿಸಿದ್ದೇವೆ. ಈಚೆಗೆ, ಏಪ್ರಿಲ್ 13ರಂದು ಬೆಂಗಳೂರು ನಗರದ ಚೌಡಯ್ಯ ಸ್ಮಾರಕ ಭವನದಲ್ಲಿ ಆ ಪ್ರಶಸ್ತಿಯನ್ನು ನೀಡುವ ಸಮಾರಂಭ ವೈಭವೋಪೇತವಾಗಿ ನಡೆಯಿತು. ಪ್ರಶಸ್ತಿ ಸ್ವೀಕಾರಕ್ಕಾಗಿ ವಯೋಧರ್ಮದ ಕಾರಣದಿಂದಾಗಿ ದೆಹಲಿಗೆ ಪ್ರಯಾಣ ಮಾಡುವುದು ಅವರಿಗೆ ಪ್ರಯಾಸಕರವೆಂದು ಗ್ರಹಿಸಿ ಭಾರತೀಯ ಜ್ಞಾನಪೀಠದ ಅಧಿಕಾರಿಗಳು ಬೆಂಗಳೂರಿಗೇ

ಬಂದು ಮಾಸ್ತಿಯವರಿಗೆ ಪ್ರಶಸ್ತಿ ನೀಡಲು ವ್ಯವಸ್ಥೆ ಮಾಡಿದ್ದು ಮೆಚ್ಚತಕ್ಕ ವಿಷಯ. ಭಾರತದ ಉಪರಾಷ್ಟ್ರಪತಿಗಳಾದ ಶ್ರೀ ಆರ್. ವೆಂಕಟರಾಮನ್ ಅವರು ಜ್ಞಾನಪೀಠದ ಪರವಾಗಿ ಪ್ರಶಸ್ತಿಯನ್ನು ನೀಡುತ್ತ, ವಾಲ್ಮೀಕಿಯ ರಾಮಾಯಣ ಆಚಂದ್ರಾರ್ಕವಾಗಿ ಇರುವವರೆಗೂ ಮಾಸ್ತಿಯವರ ಬರಹಗಳೂ ಉಳಿದುಬರುತ್ತವೆ ಎಂದರು. ಯಾವ ಕಾಲದ, ಯಾವ ದೇಶದ, ಯಾವ ಭಾಷೆಯ ಶ್ರೇಷ್ಠ ಸಾಹಿತ್ಯವೇ ಆಗಲಿ, ಸಾರ್ವಕಾಲಿಕವಾಗಿ ಸಾರ್ವತ್ರಿಕವಾಗಿ ಉಳಿಯುವುದೇ ಅದರ ಹಿರಿಮೆ.

ಡಾ॥ ಮಾಸ್ತಿಯವರಿಗೆ ನೀಡಿರುವ ಈ ಪ್ರಶಸ್ತಿ 19ನೆಯದು. 1978ರ ಹಿಂದಿನ ವರ್ಷಗಳಲ್ಲಿ ಭಾರತೀಯ ಭಾಷೆಗಳಲ್ಲಿ ರಚಿತವಾದ ಸಾಹಿತ್ಯ ಕೃತಿಗಳ ಪೈಕಿ ಅತ್ಯುತ್ತಮ ಎಂದು ಪರಿಗಣಿತವಾದುದಕ್ಕೆ ಸಲ್ಲುವ ಪ್ರಶಸ್ತಿ 'ಚಿಕವೀರರಾಜೇಂದ್ರ'ಕ್ಕೆ ದೊರೆತಿದೆ. ಪ್ರಶಸ್ತಿ ವಾಚನದಲ್ಲಿ ಅವರ ಒಟ್ಟು ಸಾಹಿತ್ಯ ಸೇವೆಗೆ ಪ್ರಶಸ್ತಿ ನೀಡಿರುವುದಾಗಿ ಹೇಳಿ, 'ಚಿಕವೀರ ರಾಜೇಂದ್ರ'ದೊಂದಿಗೆ ಮಾಸ್ತಿಯವರ 'ನವರಾತ್ರಿ', 'ಭಾವ', 'ಶ್ರೀರಾಮಪಟ್ಟಾಭಿಷೇಕ' ಕೃತಿಗಳನ್ನೂ ವಿಶೇಷವಾಗಿ ಉಲ್ಲೇಖಿಸಲಾಗಿದೆ. ಈ ಮೂರು ಕೃತಿಗಳನ್ನೂ ಬೇರೆ ಬೇರೆ ಸಂದರ್ಭಗಳಲ್ಲಿ ಪ್ರಶಸ್ತಿಗಾಗಿ ವಿಮರ್ಶಕರು ಶಿಫಾರಸ್ಸು ಮಾಡಿದ್ದರೆಂದು ತಿಳಿದುಬರುತ್ತದೆ. 'ಚಿಕವೀರ ರಾಜೇಂದ್ರ'ದಂತೆಯೇ ಈ ಕೃತಿಗಳೂ ಪ್ರಶಸ್ತಿಗೆ ಯೋಗ್ಯವಾಗಿದ್ದುವು ಎಂದು ಜ್ಞಾನಪೀಠದ ಪ್ರಶಸ್ತಿ ಸಮಿತಿ ಒಪ್ಪಿಕೊಂಡಂತಾಗಿದೆ. ಅದು ಹೇಗೂ ಇರಲಿ. 'ಚಿಕವೀರ ರಾಜೇಂದ್ರ' ಕೃತಿಯನ್ನು ಕುರಿತ ಪ್ರಶಸ್ತಿ ವಾಚನದ ವಾಕ್ಯಗಳು ಉಲ್ಲೇಖಾರ್ಹವಾಗಿವೆ. ಅವು ಹೀಗಿವೆ :

The citation on Dr Masti said that "Chikkaveerarajendra", considered a remarkable work of fiction of the award period, reflects, as in a convex mirror, "simultaneously a personal tragedy –Degeneration of socio-political fabric, the conflict of the East and West at the political and cultural planes and the unfolding of a historical process." "Masti's prose is clear and limpid", "the style, urbane, his dialogues racy and vigorous, and frequently enlivened with spicy wit and tender humour."

STORY TELLER: "Masti is essentially a story-teller, a master of the art of narration whether in prose or poetry. He has come to be recognised as the "Father of Kannada short story." His short stories take us from century to century and country to country."

"Masti has been in the forefront of Kannada renaissance for more than 70 years and made a massive contribution to all the genres of literature. With his abiding faith in man's

potential greatness, his writing reflects his inner urge to assert the supremacy of the basic values of humanity that remain firm in the face of chaos. Masti is still going strong. Bharatiya Jnanapith wishes this great savant of Indian literature a long and healthy life."

ಜ್ಞಾನಪೀಠದ ಶುಭಾಶಯಗಳಿಗೆ ನಾವೂ ದನಿಗೂಡಿಸುತ್ತೇವೆ.

ಡಾ॥ ಮಾಸ್ತಿಯವರು ತಮ್ಮ ಸುದೀರ್ಘವೂ ವಿಚಾರಪೂರ್ಣವೂ ಆದ ಇಂಗ್ಲಿಷ್ ಭಾಷಣದಲ್ಲಿ, ವಿವಿಧ ಮತಧರ್ಮಗಳ ದರ್ಶನ ಪಂಥಗಳ ದೆಸೆಯಿಂದಾಗಿ, ರಾಜಕೀಯ ಕಾರಣಗಳಿಂದಾಗಿ, ಒಡೆದುಹೋಗಿರುವ ಮಾನವ ಜನಾಂಗವನ್ನು ಒಂದುಗೂಡಿಸುವ ಸಾಮರ್ಥ್ಯ ಸಾಹಿತ್ಯಕ್ಕೆ ಮಾತ್ರ ಇದೆ ಎಂದು ಹೇಳಿ, ಸಾಹಿತಿಗಳು ಸನಾತನ ಧರ್ಮದ ಉಳಿವಿಗಾಗಿ ದುಡಿಯಬೇಕೆಂದು ಕರೆಕೊಟ್ಟರು. ಪ್ರಶಸ್ತಿ ಜೊಂದಿಗೆ ತಮಗೆ ನೀಡಿದ ಒಂದೂವರೆ ಲಕ್ಷ ರೂಪಾಯಿಗಳಲ್ಲಿ ಒಂದು ಲಕ್ಷವನ್ನು ಇತರ ಸಾಹಿತಿಗಳ ಕೃತಿಗಳ ಪ್ರಕಟಣೆಗೆ ಸಹಾಯ ಮಾಡಲು ಒಂದು ನಿಧಿಯಾಗಿ ವಿನಿಯೋಗಿಸುವುದಾಗಿಯೂ ಉಳಿದ ಐವತ್ತು ಸಹಸ್ರ ರೂಪಾಯಿಗಳನ್ನು ತಮ್ಮ ಸ್ವಂತ ಕೃತಿಗಳನ್ನು ಅಗ್ಗದ ಬೆಲೆಗೆ ಮಾರಲಾಗುವಂತೆ ಅವುಗಳ ಪ್ರಕಟಣೆಗೆ ವಿನಿಯೋಗಿಸಲಾಗುವುದೆಂದೂ ಘೋಷಿಸಿದರು. ಮಾಸ್ತಿಯವರ ಈ ನಿರ್ಧಾರ ಅವರು ಎಂದಿನಿಂದಲೂ ಬಲಮುಟ್ಟಿಗೆ ಗೋಪ್ಯವಾಗಿ ನಡಸಿಕೊಂಡು ಬರುತ್ತಿರುವ ದ್ರವ್ಯಸಹಾಯಗಳಿಗೆ ಪ್ರೇರಕವಾದ ಅವರ ಔದಾರ್ಯಗುಣವನ್ನು ಈಗ ಪ್ರಕಟವಾಗಿ ಸಾರುತ್ತಿದೆ. ಈ ಔದಾರ್ಯದ ಅಂಶವಾದರೂ ಕನ್ನಡ ಸಾಹಿತ್ಯ ಎಲ್ಲ ಸಾಹಿತಿಗಳ ಸಾಮೂಹಿಕ ಪ್ರಯತ್ನದಿಂದ ಇತೋಪ್ಯತಿಶಯವಾಗಿ ಬೆಳೆಯಲಿ ಎಂಬುದೇ ಆಗಿದೆ. ಮಾಸ್ತಿ ಕನ್ನಡದ ಆಸ್ತಿ ಎಂಬ ಮಾತು ಅನೇಕ ಅರ್ಥಗಳಲ್ಲಿ ಅನ್ವರ್ಥಕ. ಬರಿಯ ಆಸ್ತಿ ಅಲ್ಲ: ತವನಿಧಿ.

## ಶ್ರೀ ಸಿ. ಕೆ. ನಾಗರಾಜರಾವ್ ಅವರಿಗೆ ಭಾರತೀಯ ಜ್ಞಾನಪೀಠದ ಪ್ರಥಮ (1983) ಮೂರ್ತಿದೇವಿ ಸಾಹಿತ್ಯ ಪುರಸ್ಕಾರ

ಭಾರತೀಯ ಸಾಹಿತ್ಯ ಕೃತಿಗಳಿಗೆ ಸಲ್ಲುವ ಉತ್ಕೃಷ್ಟ ಪ್ರಶಸ್ತಿಯೆಂದರೆ ಭಾರತೀಯ ಜ್ಞಾನಪೀಠ ಪ್ರಶಸ್ತಿ. ಈ ಜ್ಞಾನಪೀಠ ಈಗ ಮತ್ತೊಂದು ಪ್ರಶಸ್ತಿಯಾದ "ಮೂರ್ತಿದೇವಿ ಸಾಹಿತ್ಯ ಪುರಸ್ಕಾರ"ವನ್ನೂ ಇಟ್ಟಿದ್ದು ಇದರ ಪ್ರಪ್ರಥಮ ಪ್ರಶಸ್ತಿ ಕನ್ನಡದ ಬೃಹತ್ಕಾದಂಬರಿಗಳಲ್ಲೊಂದಾದ ಶ್ರೀ ಸಿ. ಕೆ. ನಾಗರಾಜರಾವ್ ಅವರ "ಪಟ್ಟಮಹಾದೇವಿ ಶಾನ್ತಲದೇವಿ" ಗ್ರಂಥಕ್ಕೆ ಲಭಿಸಿರುವುದು ಕನ್ನಡಕ್ಕೆ ಸಂದ ಗೌರವವಾಗಿದೆ.

ದಿನಾಂಕ 11–5–1985ರಂದು ನವದೆಹಲಿಯಲ್ಲಿ ನಡೆದ ಪ್ರಶಸ್ತಿ ಪುರಸ್ಕಾರ ಸಮಾರಂಭದಲ್ಲಿ ಕೇಂದ್ರ ವಾರ್ತಾ ಮತ್ತು ಪ್ರಚಾರ ಇಲಾಖೆಯ ಸಚಿವರಾದ ಶ್ರೀ

ವಿ. ಎಸ್. ಗಾಡ್ಗಿಲ್ ಅವರು ಶ್ರೀಯುತರಿಗೆ ಪ್ರಶಸ್ತಿಯನ್ನು ನೀಡುವುದರ ಜೊತೆಗೆ ಕೃತಿಯ ಎರಡನೇ ಸಂಪುಟದ ಹಿಂದಿ ಆವೃತ್ತಿಯನ್ನು ಬಿಡುಗಡೆ ಮಾಡಿದರು.

ಈ ಸಂದರ್ಭದಲ್ಲಿ ಶ್ರೀ ಸಿ. ಕೆ. ನಾಗರಾಜರಾಯರಿಗೆ ಪ್ರತಿಷ್ಠಾನದ ಪರವಾಗಿ 'ಲೋಚನ'ದ ಅಭಿನಂದನೆ.

---

## ಶ್ರದ್ಧಾಂಜಲಿ

ಈಚೆಗೆ (3–4–1985ರಂದು) ಮಹಾಮಹೋಪಾಧ್ಯಾಯ **ವಿ. ವಿ. ಮಿರಾಶಿ**ಯವರು ನಾಗಪುರದಲ್ಲಿ ತೀರಿಕೊಂಡದ್ದು ಭಾರತದ ಜ್ಞಾನಪ್ರಪಂಚಕ್ಕೆ ದೊಡ್ಡ ನಷ್ಟವಾಗಿದೆ. ಈ ಮಹನೀಯರು ನಾಗಪುರ ವಿಶ್ವವಿದ್ಯಾನಿಲಯದ ಸಂಸ್ಕೃತ ವಿಭಾಗದ ಮುಖ್ಯರಾಗಿ ಸೇವೆ ಸಲ್ಲಿಸಿ, ನಿವೃತ್ತರಾದಮೇಲೂ ಸಂಸ್ಕೃತ ಸಾಹಿತ್ಯದಲ್ಲೂ ಭಾರತ ವಿಚಾರ ಶಾಸ್ತ್ರದಲ್ಲೂ (Indology) ಅನೇಕ ವಿದ್ವತ್‌ಪೂರ್ಣ ಗ್ರಂಥಗಳನ್ನು ರಚಿಸಿ ಭಾರತ ಸರ್ಕಾರದಿಂದ ಮನ್ನಣೆ ಪಡೆದಿದ್ದರು. ಡಾ॥ ಮಾಸ್ತಿ ವೆಂಕಟೇಶ ಅಯ್ಯಂಗಾರರು ಕೇಂದ್ರ ಸಾಹಿತ್ಯ ಅಕಾಡೆಮಿಯ ಗೌರವಾನ್ವಿತ ಸದಸ್ಯ ('ಫೆಲೋ') ಆಗಿ ನೇಮಕಗೊಂಡಾಗಲೇ ಡಾ॥ ಮಿರಾಶಿಯವರೂ ಆ ಗೌರವವನ್ನು ಪಡೆದರು. ಮಿರಾಶಿಯವರು ಮಹಾಕವಿ ಕಾಳಿದಾಸನ ಬಗ್ಗೆ ಆಳವಾದ ಸಂಶೋಧನೆ ನಡಸಿದ್ದರು. ಅದರ ಫಲವಾಗಿ, ನಾಗಪುರದ ಸಮೀಪದಲ್ಲಿರುವ 'ರಾಮ್‌ಟೇಕ್' ಎಂಬ ನಿಸರ್ಗರಮ್ಯ ಪ್ರದೇಶದಲ್ಲಿರುವ ಗುಡ್ಡವೇ ಕಾಳಿದಾಸನು ಮೇಘಸಂದೇಶದಲ್ಲಿ ಉಲ್ಲೇಖಿಸಿರುವ ರಾಮಗಿರಿಯೆಂದೂ ಅಲ್ಲಿಯೇ ಕಾಳಿದಾಸನು ತನ್ನ ಮೇಘಸಂದೇಶವನ್ನು ರಚಿಸಿದನೆಂದೂ ಅವರ ತೀರ್ಮಾನ. ರಾಮ್‌ಟೇಕ್ ಗುಡ್ಡದಮೇಲೆ ಕಾಳಿದಾಸ ಸ್ಮಾರಕವನ್ನು ನಿರ್ಮಾಣ ಮಾಡುವಂತೆ ಮಹಾರಾಷ್ಟ್ರ ಸರ್ಕಾರವನ್ನು ಕಾರ್ಯಪ್ರವೃತ್ತವಾಗಿ ಮಾಡಿ ತಮ್ಮ ಸಂಶೋಧನೆಗೆ ಮೂರ್ತಸ್ವರೂಪವನ್ನು ಕೊಟ್ಟದ್ದು ಅವರ ಬದುಕಿನ ದೊಡ್ಡ ಸಾಧನೆ. (ಕಾಳಿದಾಸ ಸ್ಮಾರಕದ ಬಗ್ಗೆ ಹಿಂದಿನ ಸಂಚಿಕೆಯಲ್ಲಿ ಪ್ರಸ್ತಾವಿಸಲಾಗಿದೆ.)

ಡಾ॥ ಮಿರಾಶಿಯವರು ಭಾರತ ಸರ್ಕಾರದ ಆದೇಶದಂತೆ ಕೈಕೊಂಡು ಪೂರ್ತಿ ಮಾಡಿದ, ಕರ್ನಾಟಕಕ್ಕೆ ಸಂಬಂಧಪಟ್ಟ ಒಂದು ಮಹತ್ವಪೂರ್ಣ ಕಾರ್ಯವನ್ನು ಈ ಸಂದರ್ಭದಲ್ಲಿ ಅಗತ್ಯವಾಗಿ ಉಲ್ಲೇಖಿಸಬೇಕು. ಅದೇನೆಂದರೆ, ಭಾರತ ಸರ್ಕಾರದ ಎಪಿಗ್ರಾಫಿಯಾ ಇಂಡಿಕಾದ (Epigraphia Indica) ಶಾಸನಗ್ರಂಥಮಾಲೆಗೆ ಶಿಲಾಹಾರ ರಾಜವಂಶದ (ಶಿಲಾಹಾರರು ರಾಷ್ಟ್ರಕೂಟರ ಹಾಗೂ ಚಾಲುಕ್ಯರ ಮಾಂಡಲಿಕರಾಗಿದ್ದರು.) ಕನ್ನಡ ಶಾಸನಗಳನ್ನು ಸಂಪಾದನೆ ಮಾಡಿಕೊಟ್ಟದ್ದು.

**ಬಿ. ಎಂ. ಶಿವರಾಮಯ್ಯ :** ಬಿ.ಎಂ.ಶ್ರೀ. ಅವರ ಸಹೋದರರೂ, ನಂಜನಗೂಡಿನ ಪ್ರಸಿದ್ಧ ವಕೀಲರೂ ಆದ ಬಿ. ಎಂ. ಶಿವರಾಮಯ್ಯನವರು ಈಚೆಗೆ ಏಪ್ರಿಲ್

ತಿಂಗಳಲ್ಲಿ ನಂಜನಗೂಡಿನಲ್ಲಿ ಹೃದಯಾಘಾತದಿಂದ ನಿಧನರಾದದ್ದು ವ್ಯಸನದ ಸಂಗತಿ. ಅವರು ಬಿ.ಎಂ.ಶ್ರೀ.ಯವರಲ್ಲಿ ಅಗಾಧವಾದ ಭಕ್ತಿಯನ್ನು ಇಟ್ಟುಕೊಂಡಿದ್ದರು. ವಿಜ್ಞಾನ ವಿಷಯವಾಗಿ ಕನ್ನಡದಲ್ಲಿ ಹಲವಡೆ ಉಪನ್ಯಾಸಗಳನ್ನು ಮಾಡುತ್ತಿದ್ದರಲ್ಲದೆ, ವಿಜ್ಞಾನವನ್ನು ಜನಪ್ರಿಯ ಮಾಡುವ ಸಲುವಾಗಿ ಸಾಮಾನ್ಯರಿಗೂ, ಮಕ್ಕಳಿಗೂ ವಿಜ್ಞಾನ ವಿಷಯಗಳನ್ನು ಸರಳವಾದ ಭಾಷೆಯಲ್ಲಿ ತಿಳಿಸುವ ಗ್ರಂಥಗಳನ್ನೂ ರಚಿಸಿರು ವರು. ಬಿ.ಎಂ.ಶ್ರೀ. ಜನ್ಮಶತಮಾನೋತ್ಸವ ವರ್ಷದಲ್ಲಿ ಅನೇಕ ಕಾರ್ಯಕ್ರಮಗಳಲ್ಲಿ ಭಾಗವಹಿಸಿದ್ದರು. ಮುಖ್ಯವಾಗಿ ಬೆಳ್ಳೂರು, ಸಂಪಿಗೆ ಮತ್ತು ನಂಜನಗೂಡು ಕಾರ್ಯಕ್ರಮಗಳಲ್ಲಿ ಅವರು ಭಾಗವಹಿಸಿದ್ದನ್ನು ಇಲ್ಲಿ ಸ್ಮರಿಸಬಹುದು. ಬಿ.ಎಂ.ಶ್ರೀ. ಯವರ ವಿಚಾರವಾಗಿ ಅನೇಕ ವೈಯಕ್ತಿಕ ಸಂಗತಿಗಳನ್ನು ಅವರಿಂದ ಕೇಳಿ ದಾಖಲಿಸ ಬೇಕೆಂಬ ಪ್ರತಿಷ್ಠಾನದ ಉದ್ದೇಶಕ್ಕೆ ಈಗ ಭಂಗ ಬಂದಿದೆ. ಶ್ರೀಯುತರ ನಿಧನ ಕನ್ನಡಕ್ಕೆ ದೊಡ್ಡ ನಷ್ಟ.

**ಮ. ನ. ಚೌಡಪ್ಪ :** ದಿನಾಂಕ 20-2-1985 ರಂದು ಮಾಯಸಂದ್ರದ ನಾರಸೀ ದೇವಯ್ಯನವರ ಜೇಷ್ಠಪುತ್ರರಾದ ಚೌಡಪ್ಪನವರು ನಿಧನರಾದರು. ಇವರು ಮೈಸೂರು ಮಹಾರಾಜ ಕಾಲೇಜಿನಲ್ಲಿ ತೀ.ನಂ.ಶ್ರೀ., ವೆಂಕಣ್ಣಯ್ಯ ಮತ್ತು ನಾ. ಕಸ್ತೂರಿಯವರ ಶಿಷ್ಯರಾಗಿ, ವಿದ್ಯಾರ್ಥಿ ದೆಸೆಯಲ್ಲಿಯೇ ಕನ್ನಡದ ಚಟುವಟಿಕೆಗಳಲ್ಲಿ ಕ್ರಿಯಾಶೀಲರಾಗಿ ಆಸಕ್ತಿ ವಹಿಸಿದ್ದರು. ಅನಂತರ ಬಿ. ಎನ್. ಗುಪ್ತ ಅವರ ಆಪ್ತ ರಾಗಿ, ಅವರು ನಡೆಸುತ್ತಿದ್ದ 'ಕಥಾಂಜಲಿ' ಹಾಗೂ 'ಪ್ರಜಾಮತ'ಗಳ ಸಂಪಾದಕ ರಾಗಿ ಗಣ್ಯವಾದ ಸೇವೆ ಸಲ್ಲಿಸಿದ್ದರು. ಹಲವು ವರ್ಷ ಕಾಲ ಮೈಸೂರಿನಲ್ಲಿ ಸ್ಥಾಪಿತ ವಾದ ಆಕಾಶವಾಣಿ ಹಾಗೂ ಬೆಂಗಳೂರಿನ ಆಕಾಶವಾಣಿ ನಿಲಯಗಳಲ್ಲಿ ಉದ್ಯೋಗ ದಲ್ಲಿದ್ದರು. ಹವ್ಯಾಸಿ ನಾಟಕ ರಂಗದಲ್ಲಿ ನಟರಾಗಿದ್ದುದಲ್ಲದೆ 'ಚಂದ್ರಗುಪ್ತ' ಎಂಬ ಐತಿಹಾಸಿಕ ನಾಟಕವನ್ನು ರಚಿಸಿದ್ದಾರೆ. ಇವರ ಇನ್ನೊಂದು ಗಣ್ಯವಾದ ಕೃತಿ ಎಂದರೆ ಮುಮ್ಮಡಿ ಕೃಷ್ಣರಾಜ ಒಡೆಯರನ್ನು ಕುರಿತ ಐತಿಹಾಸಿಕ ಕಾದಂಬರಿ. ಜ್ಞಾನ ಗಂಗೋತ್ರಿ ವಿಶ್ವಕೋಶದ ಕಲೆ ಮತ್ತು ಸಾಹಿತ್ಯಕ್ಕೆ ಸಂಬಂಧಪಟ್ಟ ಸಂಪುಟದ ಸಹಾಯಕರಾಗಿದ್ದರು.

**ಪ್ರೊ॥ ಎಚ್. ಜಿ. ಸೂರ್ಯನಾರಾಯಣ** ಅವರು 24-5-1985ರಂದು ನಿಧನ ರಾದದ್ದು ವಿದ್ವತ್ ಪ್ರಪಂಚಕ್ಕೆ ಗಮನಾರ್ಹವಾದ ನಷ್ಟ. ಮೈಸೂರು ವಿಶ್ವವಿದ್ಯಾ ನಿಲಯದಲ್ಲಿ ಇಂಗ್ಲಿಷ್ ಪ್ರಾಧ್ಯಾಪಕರಾಗಿದ್ದ ಇವರು ಕನ್ನಡ ಹಾಗೂ ಸಂಸ್ಕೃತ ಭಾಷೆ ಗಳಲ್ಲಿ ಗಮನಾರ್ಹವಾದ ಪಾಂಡಿತ್ಯವುಳ್ಳವರಾಗಿದ್ದಾರೆ. ವಿಶ್ವವಿದ್ಯಾನಿಲಯ ಪ್ರಕಟಿ ಸುತ್ತಿರುವ ಗ್ರಂಥಸೂಚಿ ಹಾಗೂ ಇಂಗ್ಲಿಷ್-ಕನ್ನಡ ನಿಘಂಟಿನ ಪುನಃಪರಿಷ್ಕರಣ— ಈ ಸಂಬಂಧದಲ್ಲಿ ಅವರು ಗಣ್ಯವಾದ ಸೇವೆ ಸಲ್ಲಿಸಿದ್ದಾರೆ.

ಈ ಮೂವರು ಮೃತರ ಕುಟುಂಬವರ್ಗಕ್ಕೆ ಲೋಚನದ ಪರವಾಗಿ ನಮ್ಮ ಅನುತಾಪವನ್ನು ಸೂಚಿಸುತ್ತೇವೆ.

---



## ಇತರ ಪ್ರಕಟನೆಗಳು

(ಇವುಗಳ ಮಾರಾಟದಿಂದ ಬಂದ ಹಣ ಪ್ರತಿಷ್ಠಾನದ ನಿಧಿಗೆ ಸೇರುತ್ತದೆ.)

| | | |
|---|---|---|
| 1. | ಅಧ್ಯಯನ (ಡಾ॥ ಶಂ. ಬಾ. ಜೋಶಿ ಅಭಿನಂದನ ಗ್ರಂಥ) (ಡಾ॥ ಶಂಬಾ ಜೋಶಿ ಅಭಿನಂದನ ಸಮಿತಿ ಕೊಡುಗೆ) | 50-00 |
| 2. | ಕವಿಜಿಹ್ವಾಬಂಧನ (ಡಾ॥ ಶ್ರೀಮತಿ ಕೆ. ಶಾಂತ ಅವರ ಕೊಡುಗೆ) | 2-00 |
| 3. | ಆಸ್ವಾದ (ಪ್ರೊ॥ ಎಂ.ವಿ.ಸೀ. ಅಭಿನಂದನ ಗ್ರಂಥ) | 75-00 |
| 4. | ಕಾಣಿಕೆ (ಕವನ ಸಂಕಲನ) | 5-00 |
| 5. | ಹಳೆ ಬೇರು ಹೊಸ ಚಿಗುರು (ಕವನ ಸಂಕಲನ) | 5-00 |
| 6. | ಪ್ರೊ॥ ಎಂ.ವಿ.ಸೀ. ಅವರ ಪುಸ್ತಕಗಳು : [ಸೆಟ್ ಪುಸ್ತಕ ಕೊಂಡರೆ | 35-00] |
| | 1. ಕವಿಯ ಹೆಂಡತಿ (ನಾಟಕ) | 2-00 |
| | 2. ಸ್ವಯಂವರ (ನಾಟಕ) | 2-00 |
| | 3. ಸ್ನೇಹದ ಕಾಣಿಕೆ (ಕಾದಂಬರಿ) | 3-00 |
| | 4. ಕನ್ನಡವ್ವನ ಕೊರಗು | 8-00 |
| | 5. ಹೊಸಗನ್ನಡ ಸಾಹಿತ್ಯ ಮತ್ತು ಇತರ ಲೇಖನಗಳು | 5-00 |
| | 6. ರಾಘವ ಕವನ ಕೋಶ (7, 8, 9ರ ಕವನಗಳ ಸಂಗ್ರಹ) | 20-00 |
| | 7. ಗೀತಭಾರತಿ | 5-00 |
| | 8. ಹಂಸ ಪಥ | 10-00 |
| | 9. ಮುಗಿಯದ ಮಾಯೆ | 5-00 |
| | 10. ನಿಲ್ದಾಣಗಳ ನಡುವೆ (ಕಥಾಸಂಗ್ರಹ) (ಸೆಟ್‌ಗೆ 6 ಅಥವಾ 7, 8, 9ನ್ನು ಕೊಡಲಾಗುತ್ತದೆ) | 20-00 |
| 7. | ನಾಡೋಜ ಬಿ.ಎಂ.ಶ್ರೀ. | 5-00 |

### ಸಿದ್ಧತೆಯಲ್ಲಿ

1. ಶ್ರೀ ಕೃಷ್ಣ ಬಾಲಲೀಲೆ : ಭಾಗ ೧ (ಅಚ್ಚಿನಲ್ಲಿ) ಮತ್ತು ಭಾಗ ೨.
(ತಿಮ್ಮಪ್ಪದಾಸರ ಕೀರ್ತನರೂಪದ ಭಾಗವತ ಗ್ರಂಥ)
2. ರಸಮಂಜರಿ (ಜಾಯೇಂದ್ರನ ಲಕ್ಷಣ ಗ್ರಂಥ)
3. ಕುಮಾರವ್ಯಾಸ ಭಾರತ ಸಂಗ್ರಹ (ಬಿ.ಎಂ.ಶ್ರೀ. ಮತ್ತು ಇತರರು ಸಂಪಾದಿಸಿದ್ದು)

**ಲೋಚನ** (ಷಾಣ್ಮಾಸಿಕ ವಿದ್ವತ್ ಪತ್ರಿಕೆ) ಬಿಡಿ ಪ್ರತಿ ರೂ. 4-00
ಪ್ರತಿಷ್ಠಾನದ ಸದಸ್ಯರಿಗೆ ಉಚಿತ. ವಾರ್ಷಿಕ ಚಂದಾ 6-00
ಸದಸ್ಯತ್ವ ವಾರ್ಷಿಕ 25-00, ಆಜೀವ 250-00. ಆಜೀವ 100-00




# ಪ್ರತಿಷ್ಠಾನದ ಪ್ರಕಟನೆಗಳು

| | | |
|---|---|---|
| 1. | ಮಣಿಹ (ಫ. ಗು. ಹಳಕಟ್ಟಿ ಸಂಸ್ಮರಣ ಸಂಪುಟ) | 50-00 |
| 2. | [illegible]ಂದ್ರ ಸ್ಮೃತಿ (ಸಾಹಿತ್ಯ ಭಂಡಾರದಲ್ಲೂ ದೊರೆಯುತ್ತದೆ) | 5-00 |
| 3. | ಸರ್ವಜ್ಞ ವಚನಗಳು | 15-00 |
| 4. | ಸೂತ ಭಾರತ | 15-00 |
| 5. | ಶ್ರೀ ಕೃಷ್ಣದೇವರಾಯ ದಿನಚರಿ | 10-00 |
| 6. | ಹಸ್ತಪ್ರತಿ ಶಾಸ್ತ್ರ | 15-00 |

## ದತ್ತಿ ಉಪನ್ಯಾಸ ಮಾಲೆ

| | | |
|---|---|---|
| 7. | ಮೂರು ದತ್ತಿ ಉಪನ್ಯಾಸಗಳು | 10-00 |
| 8. | ವೈವಸ್ವತ ಮನು | 5-00 |
| 9. | ಮೂರು ದತ್ತಿ ಉಪನ್ಯಾಸಗಳು—೧೯೮೪ | 10-00 |

## ತಿಮ್ಮಪ್ಪದಾಸ ಪ್ರಕಾಶನ ಮಾಲೆ

| | | |
|---|---|---|
| 10. | ಕೀರ್ತನ ಕುಸುಮಾಂಜಲಿ | 10-00 |
| 11. | ಧ್ರುವ ಚರಿತ್ರೆ | 15-00 |

## ಶ್ರೀ ಜನ್ಮಶತಾಬ್ದಿ ಕೃತಿಮಾಲೆ

| | | |
|---|---|---|
| 12. | ಶ್ರೀ ವಾಣಿ (ಸೂಕ್ತಿ ಸಂಗ್ರಹ) | 1-00 |
| 13. | ಆಚಾರ್ಯ ಬಿ.ಎಂ.ಶ್ರೀ. (ಜೀವನ ಚಿತ್ರ) | 2-00 |
| 14. | ಕನ್ನಡ ಕಣ್ವ ಬಿ.ಎಂ.ಶ್ರೀ. (ಮಕ್ಕಳಿಗೆ) | 1-50 |
| 15. | ಶ್ರೀಯವರ ಆಯ್ದ ಕವನಗಳು | 2-00 |
| 16. | ಶ್ರೀನಿಧಿ (ಸಂಸ್ಮರಣ ಸಂಪುಟ) | 60-00 |
| 17. | B M.S. The Man and His Mission | 25-00 |
| 18. | ಶ್ರೀಗಂಧ (ಸಂಸ್ಮರಣ ಸಂಚಿಕೆ) | 10-00 |
| 19. | ಇಂಗ್ಲಿಷ್ ಗೀತಗಳು (ಆಂಗ್ಲ ಮೂಲಕವನಗಳೊಂದಿಗೆ) | 20-00 |
| 20. | ಲೋಚನ ('ಶ್ರೀ' ವಿಶೇಷಾಂಕ) | 10-00 |

ಶ್ರೀ ಲಕ್ಷ್ಮೀ ಪ್ರಿಂಟರ್ಸ್, ಸುಬ್ರಮಣ್ಯ ಆಯಿಲ್ ಮಿಲ್ ಹಿಂಭಾಗ, (ಕತ್ತರಗುಪ್ಪೆ ಹತ್ತಿರ)
ಬನಶಂಕರಿ 3ನೇ ಘಟ್ಟ, ಬೆಂಗಳೂರು-560 085